



# ಹೊಂಗನಸು



ಬಿ.ಎಂ.ಶ್ರೀ ಪ್ರತಿಷ್ಠಾನದ ವಾರ್ತಾಪತ್ರ

ಹೊಂಗನಸು – 77

ಸಂಪುಟ: ೦೯ ಸಂಚಿಕೆ: ೧೧ | ಮಾರ್ಚ್ ೨೦೨೨ | ಪುಟಗಳು ೮ | ವಾರ್ಷಿಕ ಚಂದ ರೂ. ೨೦/– | ಸಂಪಾದಕರು : ಶ್ರೀ ಬಿ. ಆರ್. ರವೀಂದ್ರನಾಥ್

Vol. 09 Issue: 11 | March 2022 | Pages - 8 | A. Sub. - Rs. 20/- | Editor : Sri. B.R. Ravindranath



೧೨–೦೨–೨೦೨೨

## ಶ್ರೀ ಸಾಹಿತ್ಯ ಪ್ರಶಸ್ತಿ

### ಪ್ರಶಸ್ತಿ ಪುರಸ್ಕೃತರು : ಡಾ.ಗುರುಲಿಂಗ ಕಾಪಸೆ

ಹಿರಿಯ ಸಾಹಿತಿಗಳು, ಕರ್ನಾಟಕ ಸಾಹಿತ್ಯ ಅಕಾಡೆಮಿಯ ಮಾಜಿ ಅಧ್ಯಕ್ಷರು



ಕರ್ನಾಟಕ ಸಾಹಿತ್ಯ ಅಕಾಡೆಮಿ ಮಾಜಿ ಅಧ್ಯಕ್ಷರು, ವಿದ್ವಾಂಸರು, ಡಾ ಗುರುಲಿಂಗ ಕಾಪಸೆ ಅವರಿಗೆ ಬಿ.ಎಂ.ಶ್ರೀ. ಪ್ರತಿಷ್ಠಾನದ ಪ್ರತಿಷ್ಠಿತ ಪ್ರಶಸ್ತಿಯಾದ 'ಶ್ರೀ ಸಾಹಿತ್ಯ ಪ್ರಶಸ್ತಿ–೨೦೨೨' ನ್ನು ನೀಡಿ ಗೌರವಿಸಲಾಯಿತು.

'ಕನ್ನಡ ಭಾಷೆ' ಅನ್ನುವ ಪದ ಇಲ್ಲ, ಬದಲಾಗಿ 'ಕನ್ನಡ ಮಾತು' ಎಂದು ಬಳಸಬೇಕೆಂದು ಕನ್ನಡದ ಕಣ್ವ ಬಿ.ಎಂ.ಶ್ರೀ. ಅವರು ಕನ್ನಡಿಗರೆಲ್ಲರಿಗೆ ಸಲಹೆ ನೀಡಿದ್ದರು ಎಂದು 'ಶ್ರೀ ಸಾಹಿತ್ಯ ಪ್ರಶಸ್ತಿ ೨೦೨೨' ಪ್ರದಾನ ಮಾಡಿದ ನಾಡೋಜ ಡಾ. ಬರಗೂರು ರಾಮಚಂದ್ರಪ್ಪ ನೆನಪಿಸಿದರು. ಧಾರವಾಡದಲ್ಲಿ ೧೯೧೧ರಲ್ಲಿ ಬಿ.ಎಂ.ಶ್ರೀ. ಅವರು 'ಕನ್ನಡ ಮಾತು ತಲೆಯೆತ್ತುವ ಬಗೆ' ಕುರಿತಂತೆ ಮಾಡಿದ ಭಾಷಣವು ಇವತ್ತಿಗೂ ಕೂಡಾ ಕನ್ನಡ ಸಾಹಿತ್ಯಕ್ಕೆ ಕಾರ್ಯಸೂಚಿಯಾಗಿದೆ. ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಎಂದಿಗೂ ಮರೆಯಲಾಗದ ಅರ್ಥಪೂರ್ಣ ಮಾತನ್ನು ಕೊಟ್ಟವರು ಬಿ.ಎಂ.ಶ್ರೀ.ಯವರು ಎಂದು ಅವರು ಅಭಿಪ್ರಾಯಪಟ್ಟರು.

ಇಂದಿಗೂ ಯಾವ ಭಾಷೆಗೆ ಪ್ರಾಮುಖ್ಯತೆ ಕೊಡಬೇಕು, ಯಾವ ಭಾಷೆಯನ್ನು ಮೊದಲು ಕಲಿಯಬೇಕು ಎನ್ನುವ ಬಗೆಗೆ ಗೊಂದಲಗಳಿವೆ. ಕನ್ನಡ, ಸಂಸ್ಕೃತ ಹಾಗೂ ಪ್ರಾದೇಶಿಕ ಭಾಷೆಯನ್ನು ತಿಳಿದಿರಬೇಕು. ಆದರೆ, ಅಲ್ಲಿ ೧೯೨೮ರಲ್ಲಿ ಆದ್ಯತೆ ಯಾವುದಾಗಿರಬೇಕಿತ್ತು ಎನ್ನುವುದು ಬಿ.ಎಂ.ಶ್ರೀ. ಅವರಿಗೆ ಸ್ಪಷ್ಟವಾಗಿತ್ತು. ಅದನ್ನು ಅವರು ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದಾಗ ಸ್ಪಷ್ಟಪಡಿಸುತ್ತಾರೆ. 'ಕನ್ನಡ ನಾಡಿಗೆ ಕನ್ನಡವೇ ಗತಿ. ಅನ್ಯಥಾ ಶರಣಂ ನಾಸ್ತಿ' ಎಂದಿದ್ದರು ಎಂದು ನಾಡೋಜ ಡಾ. ಬರಗೂರು ರಾಮಚಂದ್ರಪ್ಪ ಹೇಳಿದರು.

'ಶ್ರೀ ಸಾಹಿತ್ಯ ಪ್ರಶಸ್ತಿ ೨೨' ಪ್ರಶಸ್ತಿ ಪುರಸ್ಕೃತ ಗುರುಲಿಂಗ ಕಾಪಸೆ ಅವರದ್ದು ಗಟ್ಟಿ ವ್ಯಕ್ತಿತ್ವ ಹಾಗೂ ಮೃದು ಮನಸ್ಸು ಎಂದು ಬಣ್ಣಿಸಿದ ಸಾಹಿತಿ ಡಾ. ಪಿ.ವಿ. ನಾರಾಯಣ ಅವರು ವಿಶೇಷ ಆಹ್ವಾನಿತರಾಗಿ ಮಾತನಾಡಿ 'ಮನುಷ್ಯ ಆಧ್ಯಾತ್ಮಿಕವಾಗಿ ಅನುಭವ ಹೊಂದಿದಷ್ಟೂ ಮನಸ್ಸು ಪಕ್ವವಾಗುತ್ತದೆ. ಮಕ್ಕಳಲ್ಲಿ ಧರ್ಮ ಹಾಗೂ ಜ್ಞಾನದ ಕುರಿತ ಆಲೋಚನಾ ಕ್ರಮಗಳು ವಿರಳವಾಗುತ್ತಿವೆ'. ಇದಕ್ಕೆ ಗುರುಲಿಂಗ ಕಾಪಸೆ ಅವರಂತಹ ಬರಹಗಾರರ ಸಂಖ್ಯೆ ಇಳಿಮುಖವಾಗುತ್ತಿರುವುದೇ ಕಾರಣ. ಪ್ರೀತಿಯನ್ನು ತುಳಿದರೆ ಬಂಡಾಯ ಸಾಹಿತಿ ಆಗುವುದಿಲ್ಲ. ಕೆಳಗೆ ಬಿದ್ದವರನ್ನು ಮೇಲೆ ಎತ್ತುವವನೇ ನಿಜವಾದ ಬಂಡಾಯ ಸಾಹಿತಿ. ಜಾತಿ ಧರ್ಮವನ್ನು ಮೀರಿದ ಆಲೋಚನಾ ಕ್ರಮ ಎಲ್ಲರಲ್ಲಿ ಯಾವಾಗ ಬರುತ್ತದೆಯೋ ಆಗ ಸಮಾಜದ ಏಳಿಗೆ ಆಗುತ್ತದೆ ಎಂದರು.

೨ನೇ ಪುಟಕ್ಕೆ

ಸಂಪಾದಕೀಯ

ಹೊಂಗನಸು ಪ್ರಾರಂಭವಾಗಿ ಏಳು ವರ್ಷಗಳು ಕಳೆದಿವೆ. ಕರೋನಾ ದೆಸೆಯಿಂದ ಕೆಲವು ತಿಂಗಳುಗಳಲ್ಲಿ ಪ್ರಕಟಿಸಲಾಗದ ಪರಿಸ್ಥಿತಿಯನ್ನು ಹೊರತುಪಡಿಸಿ ೭೭ ಸಂಚಿಕೆಗಳನ್ನು ನಿರಂತರವಾಗಿ ಪ್ರಕಟಿಸಲಾಗಿದೆ. ಪ್ರತಿ ಸಂಚಿಕೆಯನ್ನು ಸದಸ್ಯರ ಮನೆಗೆ ತಲುಪಿಸವವರೆಗೆ ಇರುವ ಶ್ರಮದ ಬಗ್ಗೆ ಬಹುತೇಕ ಓದುಗರಿಗೆ ತಿಳಿಯದಿರಬಹುದು. ಪ್ರತಿ ಸಂಚಿಕೆಯನ್ನು ಪ್ರಕಟಿಸುವಾಗ ಸಂಪಾದಕರು ಹಾಕಿರುವ ಶ್ರಮವಲ್ಲದೆ ಪ್ರತಿಷ್ಠಾನದ ಅಧ್ಯಕ್ಷರು, ಕಾರ್ಯದರ್ಶಿ, ಕೋಶಾಧಿಕಾರಿ, ಹಸ್ತಪ್ರತಿ ಸಂಯೋಜನಾಧಿಕಾರಿ, ಸಿಬ್ಬಂದಿ ವರ್ಗದವರು ಮತ್ತು ಅಂಚೆ ಕಚೇರಿಯವರು ಬಹಳಷ್ಟು ಶ್ರಮ ಹಾಕಿರುತ್ತಾರೆ. ಓದುಗರಿಗೆ ತಿಳಿದಿರ ಬಹುದು.

ಈ ರೀತಿಯ ಶ್ರಮವಿಲ್ಲದೆ ಯಾವುದೇ ತಿಂಗಳ ಸಂಚಿಕೆ ಪ್ರಕಟಗೊಳ್ಳುವುದು ಅಸಾಧ್ಯವೇ ಸರಿ. ಈ ಸಂದರ್ಭದಲ್ಲಿ ಅವರೆಲ್ಲರ ಸಹಾಯ, ಬೆಂಬಲ ಹಾಗೂ ಸಹಕಾರಗಳಿಗೆ ನಾನು ಋಣಿಯಾಗಿದ್ದೇನೆ.

ಕರೋನಾ ಸೃಷ್ಟಿಸಿದ ಭಯದ ವಾತಾವರಣ ತಿಳಿಗೊಂಡಿದೆ. ಇನ್ನು ಮುಂದೆ ಆತ್ಮೀಯರನ್ನು ಭೇಟಿ ಮಾಡಲು ಅಡ್ಡಿಗಳು ದೂರವಾಗಿವೆ. ಕರೋನಾ ದೆಸೆಯಿಂದ ನಾವು ಮುಂದೂಡಿದ ಕೆಲಸಗಳನ್ನು ಇನ್ನು ಮುಂದೂಡಲು ಸಾಧ್ಯವಿಲ್ಲ.

ಕಳೆದು ಹೋಗಿರುವ ದಿನಗಳನ್ನು ಮರಳಿ ಪಡೆಯಲು ಸಾಧ್ಯವಿಲ್ಲದಿರುವುದರಿಂದ ನಮ್ಮ ಮುಂದೂಡಿದ ಕೆಲಸಗಳನ್ನು ತ್ವರೆ ಮಾಡಿ ಮುಗಿಸೋಣ.

– ಬಿ.ಆರ್. ರವೀಂದ್ರನಾಥ್

ನಮ್ಮ ಷಾಣ್ಮಾಸಿಕ ವಿದ್ವತ್ ಪತ್ರಿಕೆ– **ಕರ್ನಾಟಕ ಲೋಚನ** ತಮ್ಮೆಲ್ಲರ ಸಹಕಾರದಿಂದ, ಸಂಶೋಧನಾತ್ಮಕ ಲೇಖನಗಳನ್ನು ಒಳಗೊಂಡು ಸುಂದರವಾಗಿ ಮೂಡಿಬರುತ್ತಿದೆ. ಈ ಪತ್ರಿಕೆಯ ಆಜೀವ ಸದಸ್ಯರಾಗಲು ಚಂದಾಹಣ ರೂ. ೧೫೦೦/–ಮಾತ್ರ. ತಾವೆಲ್ಲರೂ ಈ ಪತ್ರಿಕೆಗೆ ಚಂದಾದಾರರಾಗಲು ಮನವಿ ಮಾಡಿಕೊಳ್ಳುತ್ತೇವೆ.

## ಪ್ರಕಟಣೆ

### 'ವಿ. ನಾಗರಾಜರಾವ್ ಸಮೂಹ ಮಾಧ್ಯಮ ಪ್ರಶಸ್ತಿ'

ಬಿ.ಎಂ.ಶ್ರೀ. ಪ್ರತಿಷ್ಠಾನದ ೨೦೨೨ನೇ ಸಾಲಿನ 'ಶ್ರೀ ವಿ. ನಾಗರಾಜರಾವ್ ಸಮೂಹ ಮಾಧ್ಯಮ ಪ್ರಶಸ್ತಿ'ಗೆ ಹಿರಿಯ ಪತ್ರಕರ್ತರಾದ ಶ್ರೀ ಎಚ್.ಎನ್. ಆನಂದ್ ಅವರು ಆಯ್ಕೆಯಾಗಿದ್ದಾರೆ. ಪದ್ಮರಾಜ ದಂಡಾವತಿ ಮತ್ತು ದೇವು ಪತ್ತಾರ ಅವರಿದ್ದ ಆಯ್ಕೆ ಸಮಿತಿ ಸರ್ವಾನುಮತದಿಂದ ಆಯ್ಕೆ ಮಾಡಿದೆ.

ವಿ. ನಾಗರಾಜರಾವ್ ಅವರ ಹೆಸರಿನಲ್ಲಿ ಈ ಪ್ರಶಸ್ತಿಯನ್ನು ಸ್ಥಾಪಿಸಿರುವ ಅವರ ಮಗಳು ಶ್ರೀಮತಿ ರಾಜೇಶ್ವರಿ ಕೃಷ್ಣ ಅವರ ಆಶಯದಂತೆ ಪತ್ರಿಕಾರಂಗ ಹಾಗೂ ಮಾಧ್ಯಮ ಕ್ಷೇತ್ರಕ್ಕೆ ನೀಡಿರುವ ಶ್ರೇಷ್ಠ, ಸಮಗ್ರ ಕೊಡುಗೆಯನ್ನು ಪರಿಗಣಿಸಿ ಜೀವಮಾನ ಸಾಧನೆಯ ಪ್ರಶಸ್ತಿಯಾಗಿ ಹತ್ತು ಸಾವಿರ ರೂಪಾಯಿಗಳ ನಗದು, ಸ್ಮರಣ ಫಲಕ ಮತ್ತು ಅಭಿನಂದನ ಪತ್ರದೊಂದಿಗೆ ಶ್ರೀ ಎಚ್.ಎನ್. ಆನಂದ್ ಅವರಿಗೆ ಪ್ರದಾನ ಮಾಡಲಾಗುವುದು.

೧ ನೇ ಪುಟದಿಂದ

ಕನ್ನಡ ಮಾತು, ಸಾಹಿತ್ಯದ ಬೆಳವಣಿಗೆಯಲ್ಲಿ ಬಿಎಂಶ್ರೀ ಅವರದ್ದು ಮಾದರಿ ವ್ಯಕ್ತಿತ್ವವಾಗಿದೆ ಎಂದು ಪ್ರಶಸ್ತಿ ಪುರಸ್ಕೃತ ಡಾ. ಗುರುಲಿಂಗ ಕಾಪಸೆ ಮಾತನಾಡಿ 'ಬಿ.ಎಂ.ಶ್ರೀ. ಅವರು ಭಾಷೆ, ಕಾವ್ಯ, ಅದರ ರಚನೆಯ ದೃಷ್ಟಿಯಿಂದ ಮುಖ್ಯವಾಗುತ್ತಾರೆ. ಅವರು ಕನ್ನಡ ಸಾಹಿತ್ಯ ಚಳವಳಿಯ ಮೂಲ ಪುರುಷರು, ಕನ್ನಡವೂ ಸೇರಿದಂತೆ ಪಾಶ್ಚಾತ್ಯ ಸಾಹಿತ್ಯದ ಅಧ್ಯಯನ ಮೂಲಕ ಹೊಸ ನೀರನ್ನು ತಂದುಕೊಟ್ಟವರು. ಸಾಹಿತ್ಯವೆಂದರೆ ಇಡೀ ಸಮುದಾಯವನ್ನು ಕಟ್ಟಿಕೊಡುವುದರ ಜೊತೆ–ಗೆ ಮಾನವನನ್ನು ಮಾನವನನ್ನಾಗಿ ಪರಿವರ್ತಿಸಿ ಸಮಾನತೆಯನ್ನು ಬಯಸುವಂತಹದ್ದು ಎಂದರು.

ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದ್ದ ಡಾ.ಬೈರಮಂಗಲ ರಾಮೇಗೌಡ ಮಾತನಾಡಿ, ಗುರುಲಿಂಗ ಕಾಪಸೆ ಅವರ ವ್ಯಕ್ತಿಗತ ನಡೆ, ಸಾಹಿತ್ಯದ ಎತ್ತರಗಳು ಮುಂದಿನ ಪೀಳಿಗೆಗೆ ಮಾರ್ಗದರ್ಶನ ನೀಡುತ್ತವೆ ಎಂದು ಅಭಿಪ್ರಾಯಪಟ್ಟರು. ಶ್ರೀ ಸಾಹಿತ್ಯ ಪ್ರಶಸ್ತಿ ನೀಡಲು ದೊಡ್ಡ ಮೊತ್ತದ ದತ್ತಿನಿಧಿ ಇಟ್ಟಿರುವ, ಪ್ರತಿಷ್ಠಾನದ ಬೆಳವಣಿಗೆಯಲ್ಲಿ ಪ್ರಮುಖ ಪಾತ್ರ ನಿರ್ವಹಿಸಿರುವ ಶ್ರೀಮತಿ ಕಮಲಿನಿ ಬಾಲುರಾವ್ ಅವರ ಕೊಡುಗೆಯನ್ನು ಸ್ಮರಿಸಿದರು. ಡಾ. ಎಸ್. ಅನಿಲ್‌ಕುಮಾರ್ ಅವರು ಅಭಿನಂದನಾ ಪತ್ರ ವಾಚಿಸಿದರು.

ಡಾ. ಆರ್. ಲಕ್ಷ್ಮೀನಾರಾಯಣ ಅಭಿನಂದನಾ ನುಡಿಗಳನ್ನಾಡಿ ನಿರಂತರ ಸಾಹಿತ್ಯ ಸಂಸ್ಕೃತಿ ಸೇವೆಯಲ್ಲಿ ತೊಡಗಿರುವ ಬಿ.ಎಂ.ಶ್ರೀ. ಪ್ರತಿಷ್ಠಾನಕ್ಕೆ ವಾರ್ಷಿಕ ಧನಸಹಾಯ ನೀಡದ ಕನ್ನಡ ಸಂಸ್ಕೃತಿ ಇಲಾಖೆಯ ತಾರತಮ್ಯ ನೀತಿಯ ಬಗೆಗೆ ಅಸಮಾಧಾನ ವ್ಯಕ್ತಪಡಿಸಿದರು. ಇದೇ ಸಂದರ್ಭದಲ್ಲಿ, ಬಿ. ಎಂ.ಶ್ರೀ. ಪ್ರತಿಷ್ಠಾನದಿಂದ ಆರು ತಿಂಗಳಿಗೊಮ್ಮೆ ಪ್ರಕಟವಾಗುವ 'ಕರ್ನಾಟಕ ಲೋಚನ' ವಿದ್ವತ್ ಪತ್ರಿಕೆಯನ್ನು ಗುರುಲಿಂಗ ಕಾಪಸೆ ಬಿಡುಗಡೆಗೊಳಿಸಿದರು. ಡಾ.ಬಿ.ಸಿ.ರಾಜಕುಮಾರ್ ಸ್ವಾಗತಿಸಿದರು. ಲೇಖಕಿ ಮತ್ತು ಕಾರ್ಯಕಾರಿ ಸಮಿತಿ ಸದಸ್ಯೆ ಡಾ. ಸುಜಾತ ಲಕ್ಷ್ಮೀಪುರ ಕಾರ್ಯಕ್ರಮ ನಿರೂಪಣೆ ಮಾಡಿದರು. ಡಾ. ಹಂಪನಾ, ಡಾ. ಕಮಲಾ ಹಂಪನಾ ಸೇರಿದಂತೆ ಸಾಹಿತ್ಯಾಸಕ್ತ ಗಣ್ಯರು ಹೆಚ್ಚಿನ ಸಂಖ್ಯೆಯಲ್ಲಿ ಉಪಸ್ಥಿತರಿದ್ದರು.

## ಪ್ರಕಟಣೆ

### 'ಪ್ರೊ. ಎಲ್.ಎಸ್. ಶೇಷಗಿರಿರಾವ್ ವಿಮರ್ಶಾ ಪ್ರಶಸ್ತಿ'

ಬಿ.ಎಂ.ಶ್ರೀ. ಪ್ರತಿಷ್ಠಾನದ ೨೦೨೨ನೇ ಸಾಲಿನ 'ಪ್ರೊ. ಎಲ್. ಎಸ್. ಶೇಷಗಿರಿರಾವ್ ವಿಮರ್ಶಾ ಪ್ರಶಸ್ತಿ'ಗೆ ಹಿರಿಯ ವಿಮರ್ಶಕರಾದ ಡಾ.ಬಿ.ಎನ್. ಸುಮಿತ್ರಾಬಾಯಿ ಅವರು ಆಯ್ಕೆಯಾಗಿದ್ದಾರೆ. ಡಾ.ಟಿ. ವೆಂಕಟೇಶಮೂರ್ತಿ ಮತ್ತು ಡಾ. ಬೆಳಕೆರೆ ಲಿಂಗರಾಜಯ್ಯ ಅವರಿದ್ದ ಸಮಿತಿ ಸರ್ವಾನುಮತದಿಂದ ಆಯ್ಕೆಮಾಡಿರುವ ಡಾ. ಬಿ.ಎನ್. ಸುಮಿತ್ರಾಬಾಯಿ ಅವರಿಗೆ ಹತ್ತು ಸಾವಿರ ರೂಪಾಯಿಗಳ ನಗದು, ಸ್ಮರಣ ಫಲಕ ಮತ್ತು ಅಭಿನಂದನ ಪತ್ರದೊಂದಿಗೆ ಪ್ರೊ. ಎಲ್.ಎಸ್. ಶೇಷಗಿರಿರಾವ್ ವಿಮರ್ಶಾ ಪ್ರಶಸ್ತಿಯನ್ನು ಪ್ರದಾನ ಮಾಡಲಾಗುವುದು.

ಬಿ.ಎಂ.ಶ್ರೀ. ಪ್ರತಿಷ್ಠಾನದ ಮಾಜಿ ಅಧ್ಯಕ್ಷರೂ ಮತ್ತು ಕನ್ನಡದ ಹೆಸರಾಂತ ಹಿರಿಯ ಸಾಹಿತಿ ಹಾಗೂ ವಿಮರ್ಶಕರಾದ ಪ್ರೊ.ಎಲ್. ಎಸ್. ಶೇಷಗಿರಿರಾವ್ ಅವರ ಹೆಸರಿನಲ್ಲಿ ಅವರ ಪತ್ನಿ ಶ್ರೀಮತಿ ಭಾರತೀ ಅವರು ದತ್ತಿ ಸ್ಥಾಪಿದ್ದು ಅವರ ಆಶಯದಂತೆ ಕನ್ನಡ ವಿಮರ್ಶಾ ಕ್ಷೇತ್ರದಲ್ಲಿ ಉನ್ನತ ಸಾಧನೆ ಮಾಡಿದ್ದು, ಜ್ಞಾನಪೀಠ, ಸರಸ್ವತೀ ಸಮ್ಮಾನ್, ನೃಪತುಂಗ, ಪಂಪ, ಕುವೆಂಪು, ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿಗಳಿಗೆ ಪಾತ್ರರಾಗದೇ ಇರುವವರನ್ನು ಪ್ರಶಸ್ತಿಗೆ ಪರಿಗಣಿಸಬೇಕಾಗುತ್ತದೆ.



# ಎಂ.ವಿ.ಸಿ.
# ಬದುಕು ಬರಹ – ೨೪

– ಡಾ. ಪಿ.ವಿ. ನಾರಾಯಣ

ಹಿಂದಿನ ಸಂಚಿಕೆಯಿಂದ

ಈ ಲೇಖನ ಬರೆಯುವ ಹೊತ್ತಿಗೆ ಎಂವಿಸೀ ತಮ್ಮ ಆರು ಕಥಾಸಂಕಲನಗಳಲ್ಲಿ ಐದನ್ನು ಪ್ರಕಟಿಸಿದ್ದರು. ಆರನೆಯದರಲ್ಲಿ ಸೇರಿರುವ ಹಲವನ್ನೂ ಬರೆದಿದ್ದರು. ಆದರೆ ತಾವು ತಾತ್ವಿಕ ನೆಲೆಯಲ್ಲಿ ವಿವೇಚಿಸಿದ ಲಕ್ಷಣಗಳುಳ್ಳ ಸಣ್ಣಕಥೆಯನ್ನು ಬರೆಯಲು ಪ್ರಯತ್ನಿಸಿದ್ದರು ಎಂಬ ತೀರ್ಮಾನಕ್ಕೆ ನಾವೇನು ಬರುವ ಆಗಿಲ್ಲ. ಏಕೆಂದರೆ ಸೃಜನಶೀಲ ಕೃತಿಕಾರ ಪ್ರಜ್ಞಾಪೂರ್ವಕ ಚೌಕಟ್ಟನ್ನು ನಿರ್ಮಿಸಿಕೊಂಡು ಕೃತಿರಚನೆ ಮಾಡುವುದಿಲ್ಲ. ಹೀಗಾಗಿ ಅವರೇ ವಿವರಿಸಿರುವ ಲಕ್ಷಣಗಳ ನೆಲೆಯಲ್ಲಿ ನಾವು ಅವರ ಸಣ್ಣ ಕಥೆಗಳ ಬಗ್ಗೆ ವಿವೇಚನೆ ನಡೆಸಬೇಕಾಗಿಲ್ಲ. ತಾತ್ವಿಕತೆ ಬೇರೆ, ಕೃತಿರಚನೆ ಬೇರೆ. ಆದರೂ ಎಂವಿಸೀ ಅವರಿಗೆ ಜಗತ್ತಿನ ಪ್ರಮುಖ ಕಥೆಗಾರರ ಸಣ್ಣಕಥೆಗಳ ಪರಿಚಯವಿದ್ದು, ಅವುಗಳ ಪ್ರಭಾವ ದೂರದಲ್ಲಿ ಅವರ ಸಣ್ಣಕಥೆಗಳ ರಚನೆಯ ಮೇಲೆ ಪರಿಣಾಮ ಬೀರಿರುವುದರಲ್ಲಿ ಸಂದೇಹವಿಲ್ಲ. ಅಲ್ಲದೆ ಈ ಲಕ್ಷಣಗಳೆಲ್ಲವನ್ನೂ ಖಚಿತವಾದ ರೀತಿಯಲ್ಲಿ ತೋರಿಸಿಕೊಡಲು ಸಾಧ್ಯವಿಲ್ಲ. ಉದಾಹರಣೆಗೆ, ಸಂಕ್ಷಿಪ್ತತೆ ಎನ್ನುವುದನ್ನು ಹೇಗೆ ಹೇಳುವುದು. ಸಣ್ಣಕಥೆ ಇಷ್ಟೇ ಪುಟಗಳಲ್ಲಿ ಮುಗಿಯಬೇಕು ಎಂದು ತೀರ್ಮಾನಿಸಲು ಸಾಧ್ಯವೇ? ಸ್ವಲ್ಪ ಕಡಿಮೆಯಾದರೆ ಅಥವಾ ಹೆಚ್ಚಾದರೆ ಅದರ ಯೋಗ್ಯತೆ ಎಷ್ಟು ಕಡಿಮೆಯಾಗುತ್ತದೆ ಅಥವಾ ಹೆಚ್ಚಾಗುತ್ತದೆ ಎಂದು ಮೌಲ್ಯಮಾಪನ ಮಾಡಲು ಸಾಧ್ಯವೇ? ಹೀಗಾಗಿ ಎಂವಿಸೀ ಅವರ ಸಣ್ಣ ಕಥೆಗಳ ಬಗ್ಗೆ (ಅಥವಾ ಯಾರದೇ ಕಥೆಗಳ ಬಗ್ಗೆ) ಹೇಳುವಾಗ ನಾವು ಚೌಕಟ್ಟುಗಳ ಪರಿಧಿಯನ್ನು ಮೀರಿ ಪರಿಣಾಮಕಾರಿತನವನ್ನು ಗಮನಿಸಿ ವಿವೇಚನೆ ನಡೆಸಬೇಕಾಗುತ್ತದೆ.

ಮಾಸ್ತಿ ಅವರು ಸಣ್ಣಕತೆಯ ಒಂದು ರಾಜಮಾರ್ಗವನ್ನೇ ಹೊಸಗನ್ನಡದಲ್ಲಿ ಹಾಕಿಕೊಟ್ಟರು. ಮಾಸ್ತಿಯವರ ಕಥನಮಾರ್ಗವನ್ನು ಪ್ರೊ. ಎಲ್. ಎಸ್. ಶೇಷಗಿರಿ ರಾವ್ ಹೀಗೆ ಗುರುತಿಸುತ್ತಾರೆ: “ಕಥೆಯನ್ನು ಒಬ್ಬರು ಇನ್ನೊಬ್ಬರಿಗೆ ಹೇಳಿದಂತೆ ನಿರೂಪಿಸಿ ಒಂದು ಚೌಕಟ್ಟನ್ನು ಒದಗಿಸುವುದು, ಒಂದು ಘಟನೆಯ ಸುತ್ತ ಕಥೆಯನ್ನು ಸೃಷ್ಟಿಸುವುದು, ಬಡವರು ಮೂಲೆಯಲ್ಲಿ ಹೇಗೋ ಬದುಕುತ್ತಿರುವವರು ಇಂತಹವರಲ್ಲಿ ಬೆಳಗುವ ಸಂಸ್ಕೃತಿ ಮತ್ತು ಸಜ್ಜನಿಕೆಯನ್ನು ಸ್ಪಷ್ಟಗೊಳಿಸುವುದು, ಹಿಂದಿನ ಮೈಸೂರಿನ ವಿದ್ಯಾವಂತ ಮಧ್ಯಮ ವರ್ಗದ ಕನ್ನಡದ ಬಳಕೆ – ಇವೆಲ್ಲ ಮಾಸ್ತಿಯವರಿಂದ ಬಂದವು.” ನವೋದಯದ ಕಾಲಾವಧಿಯಲ್ಲಿ ಭಾವಗೀತೆಗಿಂತ ಸಣ್ಣಕಥೆಯೇ ಹೆಚ್ಚು ಜನಪ್ರಿಯವಾದ ಸಾಹಿತ್ಯಪ್ರಕಾರವಾಗಿ ವಿಜೃಂಭಿಸಿದುದನ್ನು ಎಂ.ವಿ.ಸೀ ಅವರೇ ಎತ್ತಿ ತೋರಿದ್ದಾರೆ. ‘ಕಥಾಂಜಲಿ’, ‘ಕತೆಗಾರ’, ‘ಕಥಾಕುಂಜ’ ಮುಂತಾದ ಕೆಲವು ಮಾಸಪತ್ರಿಕೆಗಳು ಈ ಪ್ರಕಾರಕ್ಕೇ ಮೀಸಲಾಗಿದ್ದವು. ಅಂದ ಮೇಲೆ ಓದುವವರ ಸಂಖ್ಯೆ ಗಣನೀಯವಾಗಿದ್ದುದಲ್ಲದೆ, ಬರಹಗಾರರು ಬೆಳೆಯಲೂ ಇವು ಸಹಕಾರಿಯಾದವು. ಹೀಗಾಗಿ ನವೋದಯದ ಎರಡನೆಯ ಪೀಳಿಗೆಯ ಲೇಖಕರು ಸಣ್ಣಕಥೆಗಳನ್ನು ಬರೆಯಲು ಉತ್ಸಾಹ ತೋರಿದರು. ಅಂಥವರಲ್ಲಿ ಮುಖ್ಯರಾದವರೆಂದರೆ ಆನಂದ, ಆನಂದಕಂದ, ಕೆ. ಗೋಪಾಲಕೃಷ್ಣರಾವ್, ಶ್ರೀಸ್ವಾಮಿ, ಎಂವಿಸೀ ಮುಂತಾದವರು. ಇವರೆಲ್ಲರ ಮೇಲೆ ಮಾಸ್ತಿ ಕಥಾಮಾರ್ಗ ಪ್ರಭಾವ ಬೀರಿ, ಆ ಮಾರ್ಗದ ಮುಖ್ಯ ಲಕ್ಷಣವೆಲ್ಲವೂ ಕನ್ನಡ ನವೋದಯದ ಎರಡನೆಯ ಪೀಳಿಗೆಯ ಮುಖ್ಯ ಕತೆಗಾರರ ಲಕ್ಷಣಗಳೂ ಆದವು. ಎಂವಿಸೀ ಅವರ ಸಣ್ಣಕತೆಗಳ ಮೇಲೆಯೂ ಮಾಸ್ತಿ ಕಥಾಮಾರ್ಗದ ಸ್ಪಷ್ಟ ಪ್ರಭಾವವನ್ನು ಗುರುತಿಸಬಹುದು.

ಮುಂದುವರೆಯುವುದು

ಕಿರು ಪರಿಚಯ

## ಶ್ರೀ ಎಚ್.ಎನ್. ಆನಂದ್



ಶ್ರೀ ಎಚ್.ಎನ್. ಆನಂದ್ ಅವರು ಮೊದಲಿಗೆ ಇಂಡಿಯನ್ ಎಕ್ಸ್‌ಪ್ರೆಸ್ ಪತ್ರಿಕೆಯ ಬೆಂಗಳೂರು ಮತ್ತು ಗುಜರಾತ್ ಆವೃತ್ತಿಗಳಲ್ಲಿ, ಟೈಮ್ಸ್ ಆಫ್ ಇಂಡಿಯಾದ ಅಹಮದಾಬಾದ್ ಆವೃತ್ತಿಯಲ್ಲಿ, ಐಐಎಂಎ ಪ್ರಕಟಣಾ ವಿಭಾಗದ ಸಂಪಾದಕರಾಗಿ ಕಾರ್ಯನಿರ್ವಹಿಸಿ ೧೯೭೦–೮೦ರ ದಶಕದಲ್ಲಿ ‘ಸುಧಾ’ ವಾರಪತ್ರಿಕೆಯನ್ನು ಸೇರಿ ಕನ್ನಡ ನಿಯತಕಾಲಿಕೆ ಮಾಧ್ಯಮಕ್ಕೆ ಕವರ್ ಸ್ಟೋರಿ ಪರಿಕಲ್ಪನೆಯನ್ನು ಪರಿಚಯಿಸಿದರು. ಅಲ್ಲಿ ಅವರು ಬರೆಯುತ್ತಿದ್ದ ‘ವಾರೆ ನೋಟ’ ಅಂಕಣ ತನ್ನ ಮೊನಚಾದ ಹಾಸ್ಯ ಮತ್ತು ವಿಡಂಬನೆಯಿಂದ ತುಂಬಾ ಪ್ರಸಿದ್ಧವಾಗಿತ್ತು. ‘ಪ್ರಜಾವಾಣಿ’ಯ ನ್ಯೂಸ್ ಡೆಸ್ಕ್‌ನಲ್ಲಿ ಸಮರ್ಥವಾಗಿ ಕಾರ್ಯ ನಿರ್ವಹಿಸಿ ನಿವೃತ್ತರಾಗಿರುವ ಎಚ್.ಎನ್.ಆನಂದ್ ಅಜೀಂ ಪ್ರೇಮ್‌ಜಿ ವಿಶ್ವವಿದ್ಯಾಲಯದ ಪ್ರಕಟಣಾ ವಿಭಾಗದಲ್ಲೂ ಕೆಲ ಕಾಲ ಕಾರ್ಯ ನಿರ್ವಹಿಸಿದ್ದಾರೆ. ಈಗ ೭೫ನೇ ವಯಸ್ಸಿನಲ್ಲಿ ವಿಶ್ರಾಂತ ಜೀವನ ನಡೆಸುತ್ತಿದ್ದಾರೆ. ಶ್ರೀ ಎಚ್.ಎನ್. ಆನಂದ್ ಅವರ ಪ್ರಕಟಿತ ಕೃತಿಗಳು– ವಾರೆನೋಟ, ಆನಂದೋಪಾಖ್ಯಾನ, ಆನಂದ ಲಹರಿ, ಬರೆಯದ ಪತ್ರಗಳು, ತುಂತುರು.

ಕಿರು ಪರಿಚಯ

## ಡಾ. ಬಿ.ಎನ್. ಸುಮಿತ್ರಾಬಾಯಿ



ಡಾ. ಬಿ.ಎನ್. ಸುಮಿತ್ರಾಬಾಯಿ ಅವರು ಸಂಸ್ಕೃತ ಮತ್ತು ಇಂಗ್ಲಿಷ್ ಎಂ.ಎ. ಪದವೀಧರರಾಗಿದ್ದು, ಜೈನಶಾಸ್ತ್ರ ಹಾಗೂ ಪ್ರಾಕೃತದಲ್ಲಿ ಡಾಕ್ಟರೇಟ್ ಪಡೆದುಕೊಂಡಿದ್ದಾರೆ. ಪದವಿ ಕಾಲೇಜುಗಳಲ್ಲಿ ಸಂಸ್ಕೃತ ಪ್ರಾಧ್ಯಾಪಕರಾಗಿ ೩೬ ವರ್ಷಗಳ ಸೇವೆ ಸಲ್ಲಿಸಿದ್ದಾರೆ. ಅವರ ಆಸಕ್ತಿಯ ಕ್ಷೇತ್ರಗಳು – ಕನ್ನಡ, ಇಂಗ್ಲಿಷ್, ಸಂಸ್ಕೃತ ಸಾಹಿತ್ಯದಲ್ಲಿ ಅಧ್ಯಯನ ಮತ್ತು ಸಂಶೋಧನೆ; ಸ್ತ್ರೀವಾದಿ ವಿಮರ್ಶೆ; ಮಹಿಳಾ ಅಧ್ಯಯನ. ಕನ್ನಡದಲ್ಲಿ ಇಲ್ಲಿಯವರೆಗೆ ೨೫ ಪುಸ್ತಕಗಳನ್ನು ಪ್ರಕಟಿಸಿದ್ದು, ಅವು ಹಿಂದಿನ ಮತ್ತು ಇಂದಿನ ಮಹಿಳಾ ಸಾಹಿತಿಗಳ ಜೀವನ ಕಥನ ಹಾಗೂ ಏಕವಿಷಯ ಪ್ರಬಂಧಗಳನ್ನು ಒಳಗೊಂಡಿವೆ.

ರಾಷ್ಟ್ರೀಯ ಮತ್ತು ಅಂತಾರಾಷ್ಟ್ರೀಯ ಸಾಹಿತ್ಯ ಸಮ್ಮೇಳನಗಳಲ್ಲಿ ಭಾಗವಹಿಸಿರುವ ಡಾ. ಬಿ.ಎನ್. ಸುಮಿತ್ರಾಬಾಯಿಯವರು ಇಲ್ಲಿಯವರೆಗೆ ಡಾ. ಜಿ.ಎಸ್. ಶಿವರುದ್ರಪ್ಪ ಕನ್ನಡ ಸಾಹಿತ್ಯ ವಿಮರ್ಶೆ ಪ್ರಶಸ್ತಿ, ಕರ್ನಾಟಕ ಲೇಖಕಿಯರ ಸಂಘದ ಅನುಪಮಾ ಪ್ರಶಸ್ತಿ, ಕರ್ನಾಟಕ ಸರ್ಕಾರದ ದಾನ ಚಿಂತಾಮಣಿ ಅತ್ತಿಮಬ್ಬೆ ಪ್ರಶಸ್ತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಆಳ್ವಾಸ್ ನುಡಿಸಿರಿ ಪ್ರಶಸ್ತಿ, ಮಾಸ್ತಿ ಸಾಹಿತ್ಯ ಪ್ರತಿಷ್ಠಾನದ ಮಾಸ್ತಿ ಪ್ರಶಸ್ತಿಗೆ ಪಾತ್ರರಾಗಿದ್ದಾರೆ.

# ಬಿ.ಎಂ.ಶ್ರೀ ಪ್ರತಿಷ್ಠಾನದಲ್ಲಿ ನಡೆದ ಕಾರ್ಯಕ್ರಮಗಳ ವರದಿ

೦೩-೦೧-೨೦೨೨



## ಬಿ.ಎಂ.ಶ್ರೀ. ಪ್ರತಿಮೆಗೆ ಮಾಲಾರ್ಪಣೆ

ಆಚಾರ್ಯ ಬಿ.ಎಂ.ಶ್ರೀಕಂಠಯ್ಯನವರ ಜನ್ಮದಿನವಾದ ಜನವರಿ ೩ರಂದು ಬಿ.ಎಂ.ಶ್ರೀ. ಪ್ರತಿಷ್ಠಾನದ ಮೊದಲ ಅಂತಸ್ತಿನ ಮುಂಬದಿಯಲ್ಲಿರುವ ಬಿ.ಎಂ.ಶ್ರೀ. ಅವರ ಪುತ್ಥಳಿಗೆ ಡಾ. ಬೈರಮಂಗಲ ರಾಮೇಗೌಡ ಮತ್ತು ಶ್ರೀ ಬಿ.ಎಸ್. ಗುರುಪ್ರಸಾದ್ ಅವರು ಮಾಲಾರ್ಪಣೆ ಮಾಡಿ ಗೌರವ ಸಲ್ಲಿಸಿದರು.

## ಬೀಚಿ ಮತ್ತು ಹಾಸ್ಯ – ಜಾಲ ಗೋಷ್ಠಿ

೨೪-೦೧-೨೦೨೨



ಹಾಸ್ಯ ಬ್ರಹ್ಮ ಟ್ರಸ್ಟ್ ವತಿಯಿಂದ ಗೂಗಲ್ ಜಾಲಗೋಷ್ಠಿಯನ್ನು ಬಿಎಂಶ್ರೀ ಪ್ರತಿಷ್ಠಾನದ ವತಿಯಿಂದ ಏರ್ಪಡಿಸಲಾಗಿತ್ತು.ಸಂಪನ್ಮೂಲ ವ್ಯಕ್ತಿಯಾಗಿ ಪ್ರೊ.ಜಿ.ಅಶ್ವತ್ಥ ನಾರಾಯಣ ಅವರು ಈ ಕಾರ್ಯಕ್ರಮವನ್ನು ನಡೆಸಿಕೊಟ್ಟರು.

ಕನ್ನಡ ಸಾಹಿತ್ಯದಲ್ಲಿ ಇರುವ ಹಾಸ್ಯ ಸಾಹಿತ್ಯದ ಪ್ರಬೇಧಗಳನ್ನು ವಿವರಿಸಿದರು. ಹಳಗನ್ನಡ ಮತ್ತು ನಡುಗನ್ನಡ ಕಾವ್ಯಗಳಲ್ಲಿ ಸಂಸ್ಕೃತ ಸಾಹಿತ್ಯದಿಂದ ಮತ್ತು ಹೊಸಗನ್ನಡ ಸಾಹಿತ್ಯದಲ್ಲಿ ಇಂಗ್ಲಿಷ್ ಸಾಹಿತ್ಯದಿಂದ ಹಾಸ್ಯವನ್ನು ಪಡೆದುಕೊಂಡಿರುವುದರ ಉಲ್ಲೇಖವನ್ನು ಪ್ರೊ.ಜಿ.ಅಶ್ವತ್ಥ ನಾರಾಯಣ ಅವರು ಮಾಡಿದರು.

ಭೀಮಸೇನರಾವ್ (ಬಿ.ಚಿ.) ಅವರ ಸಾಹಿತ್ಯದ ಬಗ್ಗೆ ವಿವರಿಸುತ್ತಾ ಸಾಮಾನ್ಯ ಕೃತಿಗಳು, ವಿಶೇಷ ಕೃತಿಗಳು ಎಂದು ವಿಭಾಗ ಮಾಡಿದರು.ಅವರ ಸಾಹಿತ್ಯ ಕೃತಿಗಳ ಪರಿಚಯ ಮಾಡಿಕೊಡುವುದರ ಮೂಲಕ ವಿಚಾರ ಮಂಡನೆಯನ್ನು ಮುಂದುವರೆಸಿ ಬೀಚಿಯವರ ಕೃತಿಯ ಹಲವಾರು ಪ್ರಸಂಗಗಳನ್ನು ಉದಾಹರಿಸಿದರು.ಅವರ ಜೀವನ ಮತ್ತು ಕೃತಿಗಳ ಪರಿಚಯ ಮಾಡಿಕೊಟ್ಟರು,ಅವರ ಕೃತಿಗಳಲ್ಲಿ, ಭಾಷಣದಲ್ಲಿ  ಮಾತಾಡಿದ್ದೆಲ್ಲಾ ಹಾಸ್ಯ ಬೀಚಿಯವರದು.ಮುದ್ದಣನಿಂದ ಬಂದ ಹಾಸ್ಯ ಪರಂಪರೆ ಹೊಸಗನ್ನಡ ಸಾಹಿತ್ಯದಲ್ಲಿ ಮುಂದುವರಿದಿದೆ. ಶುದ್ಧ ಹಾಸ್ಯ,ವಿಚಾರದ ದಟ್ಟಣೆ,ವಿಚಿತ್ರ ದೃಷ್ಟಿಯಿಂದ ಹಾಸ್ಯ ಹೊಮ್ಮಿಸಿದ ಸಾಹಿತಗಳ ಉಲ್ಲೇಖವನ್ನು ಮಾಡಿದರು.ಶಬ್ದ,ಸಾಮಾಜಿಕ ಸಂಗತಿಗಳನ್ನು ಹಾಸ್ಯ ಬರಹಕ್ಕೆ ಮತ್ತು ಬದುಕಿನಲ್ಲಿ ಅಳವಡಿಸಿಕೊಂಡರು ಬೀಚಿ. ಕನ್ನಡ ಓದುಗರು ಮತ್ತು ಸಾಹಿತಿಯು ಆದ ಇವರು ರೈಲು ಪ್ರಯಾಣದಲ್ಲಿ ಅನಕೃ ಅವರ ಸಂಧ್ಯಾರಾಗ ಕೃತಿಯನ್ನು ಓದಿನ ಪ್ರಸಂಗದ ಮೂಲಕ ಅವರು ಕನ್ನಡ ಸಾಹಿತಿಯಾದದ್ದನ್ನು ಉಲ್ಲೇಖಿಸಿದರು. ಬಿ.ಎಂ.ಶ್ರೀ. ಪ್ರತಿಷ್ಠಾನವು ಬೀಚಿಯವರನ್ನು ಮರು ನೆನಪಿಸಿರುವ ಈ ಕಾರ್ಯಕ್ರಮವನ್ನು ಪ್ರೊ. ಜಿ. ಅಶ್ವತ್ಥನಾರಾಯಣ ಅವರ ಮೂಲಕ ನೆರವೇರಿಸಿತು.

ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿ ಪ್ರಾಸಂಗಿಕವಾಗಿ ಮಾತನಾಡಿದ ಡಾ.ಬೈರಮಂಗಲ ರಾಮೇಗೌಡ ಅವರು ಪ್ರೊ.ಜಿ. ಅಶ್ವತ್ಥ ನಾರಾಯಣ ಅವರ ಪರಿಚಯವನ್ನು ಮಾಡಿಕೊಟ್ಟರು. ಬೀಚಿಯವರ ಸಾಹಿತ್ಯದಲ್ಲಿ ಹಾಸ್ಯ ಪ್ರಜ್ಞೆ ಯನ್ನು ವಿವರಿಸಿದರು ಡಾ.ಬಿ.ಸಿ.ರಾಜಕುಮಾರ್ ಕಾರ್ಯಕ್ರಮ ಸಂಯೋಜನೆಯೊಂದಿಗೆ ಸ್ವಾಗತ ಕೋರಿ ವಂದನಾರ್ಪಣೆ ಸಲ್ಲಿಸಿದರು.

೩೦-೦೧-೨೦೨೨

## ಶ್ರೀ ಕೆ. ಮೋಹನ್ ದೇವ್ ಆಳ್ವ – ಡಾ. ಎಂ.ಕೆ. ಶೈಲಜ ಆಳ್ವ ದತ್ತಿ ಕಾರ್ಯಕ್ರಮ




ದೇಶವು ಸ್ವಾತಂತ್ರ್ಯ ದಿನಾಚರಣೆಯ ಅಮೃತ ಮಹೋತ್ಸವವನ್ನು ಆಚರಿಸುವ ಶುಭ ವರ್ಷ ೨೦೨೨. ೨೦೧೫ರಲ್ಲಿ ಶ್ರೀ ಕೆ. ಮೋಹನ್‌ದೇವ್ ಆಳ್ವ ಮತ್ತು ಡಾ. ಎಂ.ಕೆ. ಶೈಲಜಾ ಆಳ್ವ ದತ್ತಿ ನಿಧಿಯನ್ನು ಸ್ಥಾಪಿಸಲಾಯಿತು. ಪ್ರತೀ ವರ್ಷ ಸಂಗೀತ ಕ್ಷೇತ್ರದ ಅನೇಕ ಪ್ರಕಾರಗಳಲ್ಲಿ ಒಂದು ಪ್ರಕಾರವನ್ನು ಆರಿಸಿ ಸ್ಪರ್ಧೆ ಮಾಡಿ ನಗದು ಬಹುಮಾನ ನೀಡಬೇಕೆಂಬುದು ದತ್ತಿ ನಿಧಿಯ ಆಶಯವಾಗಿದೆ.  ದೇಶವು ಸ್ವಾತಂತ್ರ್ಯ ದಿನಾಚರಣೆಯನ್ನು ಆಚರಿಸಿಕೊಳ್ಳುತ್ತಿರುವ ಸಂದರ್ಭದಲ್ಲಿ ಈ ವರ್ಷ 'ದೇಶಭಕ್ತಿ ಗೀತೆಗಳ' ಸ್ಪರ್ಧೆ ನಡೆಸಬೇಕೆಂಬುದು ಶ್ರೀ ಕೆ. ಮೋಹನ್‌ದೇವ್ ಆಳ್ವ ಅವರ ಬಯಕೆಯಾಗಿತ್ತು.  ಅದರಂತೆ ಡಾ. ಬೈರಮಂಗಲ ರಾಮೇಗೌಡ ಅವರು ಸ್ಪರ್ಧೆಗೆ ಚಾಲನೆಯನ್ನು ನೀಡಿ, ಸ್ಪರ್ಧಿಗಳಿಗೆ ಶುಭಕೋರಿದರು. ಶ್ರೀ ಕೆ. ಮೋಹನ್‌ದೇವ್ ಆಳ್ವ ಅವರು ಅಧ್ಯಕ್ಷತೆಯನ್ನು ವಹಿಸಿದ್ದರು.

ಸ್ಪರ್ಧೆಯಲ್ಲಿ ಕಿರಿಯ ವಿಭಾಗ ಹಾಗೂ ಹಿರಿಯರ ವಿಭಾಗ ಎಂಬ ಎರಡು ಪ್ರತ್ಯೇಕ ತಂಡಗಳಿದ್ದವು. ೬ನೇ ವಯಸ್ಸಿನಿಂದ ೧೩ನೇ ವಯಸ್ಸಿನವರೆಗೆ ಕಿರಿಯರ ವಿಭಾಗದ್ದಾಗಿದ್ದು, ಸ್ಪರ್ಧೆಯಲ್ಲಿ ೬೫ ವಿದ್ಯಾರ್ಥಿಗಳು ಬೆಂಗಳೂರಿನ ನಾನಾ ಕಡೆಯಿಂದ ಭಾಗವಹಿಸಿದ್ದರು. ಈ ವಿಭಾಗದ ತೀರ್ಪುಗಾರರಾಗಿ ಶ್ರೀಮತಿ ವಾಸುಕಿ ಶರ್ಮ ಮತ್ತು ಶ್ರೀಮತಿ ಕೃತಿಕಾ ಶ್ರೀನಿವಾಸನ್ ಅವರು ನಡೆಸಿಕೊಟ್ಟರು. ಅದರಂತೆ ೧೪ನೇ ವಯಸ್ಸಿನಿಂದ ೨೩ವರ್ಷದವರೆಗಿನವರು ಹಿರಿಯರ ವಿಭಾಗವಾಗಿದ್ದು, ರಾಜ್ಯದ ಬೇರೆ ಬೇರೆ ಭಾಗಗಳಿಂದ ಸ್ಪರ್ಧೆಯಲ್ಲಿ ೪೦ ವಿದ್ಯಾರ್ಥಿಗಳು ಭಾಗವಹಿಸಿದ್ದರು. ಈ ವಿಭಾಗದ ತೀರ್ಪುಗಾರರಾಗಿ ವಿದ್ವಾನ್ ಶ್ರೀಕಂಠಮೂರ್ತಿ ಮತ್ತು ಶ್ರೀಮತಿ ಭಾರತಿ ಅವರು ಕಾರ್ಯ ನಿರ್ವಹಿಸಿದರು.

೪ನೇ ಪುಟಕ್ಕೆ

೪ನೇ ಪುಟದಿಂದ

ಒಟ್ಟಾರೆ ೧೦೫ ವಿದ್ಯಾರ್ಥಿಗಳು ಸ್ಪರ್ಧೆಯಲ್ಲಿ ಭಾಗವಹಿಸಿದ್ದರು. ಒಂದು ದಿನ ಪೂರ್ತಿ ಕಾರ್ಯಕ್ರಮ ನಡೆಯಿತು. ಮಧ್ಯಾಹ್ನದ ಊಟದ ನಂತರ, ಬಹುಮಾನ ವಿತರಣೆ ಕಾರ್ಯಕ್ರಮವನ್ನು ಸಂಜೆ ೪.೦೦ ಗಂಟೆಗೆ ಪ್ರಾರಂಭಿಸಲಾಯಿತು. ಡಾ. ಬೈರಮಂಗಲ ರಾಮೇಗೌಡ ಹಾಗೂ ಶ್ರೀ ಕೆ.ಮೋಹನ್ ದೇವ್ ಆಳ್ವ ಅವರು ಬಹುಮಾನ ವಿತರಣೆ ಮಾಡಿದರು. ಕಾರ್ಯಕ್ರಮದ ನಿರ್ವಹಣೆಯನ್ನು ಡಾ. ಎಸ್. ಅನಿಲ್‌ಕುಮಾರ್ ಅವರು ನಡೆಸಿಕೊಟ್ಟರು. ಬಹುಮಾನವನ್ನು ಡಾ. ಹೆಚ್.ಎಸ್.ಎಂ. ಪ್ರಕಾಶ್ ಮತ್ತು ಡಾ. ಬಿ.ಸಿ.ರಾಜ್‌ಕುಮಾರ್ ಅವರು ಓದಿದರು.

ಕಿರಿಯ ವಿಭಾಗದಲ್ಲಿ ಪ್ರಥಮ ಬಹುಮಾನವನ್ನು ಅವನಿ ಬಿ. ಎಚ್. ಕಶ್ಯಪ್, ದ್ವಿತೀಯ ಬಹುಮಾನವನ್ನು ಮಧುರಾ ಶೆಟ್ಟಿ, ತೃತೀಯ ಬಹುಮಾನವನ್ನು ಸಮರ್ಥಶಂಕರ ಆರ್. ಹಾಗೂ ಸಮಾಧಾನಕರ ಬಹುಮಾನವನ್ನು ಭೂಮಿಕಾ ಎಸ್., ಯುಕ್ತಾ.ವಿ.ಗೌಡ ಮತ್ತು ಅಕ್ಷತಾ ಅವರು ಪಡೆದುಕೊಂಡರು.

ಹಿರಿಯ ವಿಭಾಗದಲ್ಲಿ ಪ್ರಥಮ ಬಹುಮಾನವನ್ನು ಶ್ರೇಯಸ್ ಕುಮಾರ್, ದ್ವಿತೀಯ ಬಹುಮಾನವನ್ನು ರೋಜಾ, ತೃತೀಯ ಬಹುಮಾನವನ್ನು ಅನಿರುದ್ಧ ಕುಲಕರ್ಣಿ ಹಾಗೂ ಸಮಾಧಾನಕರ ಬಹುಮಾನವನ್ನು ನಿಶ್ಚಿತಾ ಪ್ರಸಾದ್ , ದೃಶ್ಯಂತ್‌ಆಚಾರ್ಯ ಜಿ.ವಿ. ಮತ್ತು ಶಮೀಕ್ ವಿ. ಭಾರದ್ವಾಜ್ ಪಡೆದುಕೊಂಡರು. ಉಳಿದಂತೆ ಭಾಗವಹಿಸಿದ ಎಲ್ಲಾ ಗಾಯಕರಿಗೂ ಮೆಚ್ಚುಗೆಯಾಗಿ ಪ್ರಮಾಣಪತ್ರ ಮತ್ತು ಬಿ.ಎಂ.ಶ್ರೀ. ಅವರ 'ಆಯ್ದ ಕವನಗಳು' ಎಂಬ ಪುಸ್ತಕವನ್ನು ನೀಡಲಾಯಿತು.

೩೧-೦೧-೨೦೨೨

## ಶ್ರೀಮತಿ ರಂಗನಾಯಕಮ್ಮ -ಶ್ರೀ ಜಿ. ಸುಬ್ಬರಾವ್ ದತ್ತಿ ಸಂಗೀತ ಕಾರ್ಯಕ್ರಮ



ಶ್ರೀಮತಿ ರಂಗನಾಯಕಮ್ಮ ಶ್ರೀ ಸುಬ್ಬರಾವ್ ಹೆಸರಿನಲ್ಲಿ ಅವರ ಮಗಳು ಶ್ರೀಮತಿ ಸುನಂದರವರು ಸ್ಥಾಪಿಸಿರುವ ದತ್ತಿ ನಿಧಿ ನಾಲ್ಕನೇ ವರ್ಷದ ಸಂಗೀತ ಕಾರ್ಯಕ್ರಮವನ್ನು ಆಯೋಜನೆ ಮಾಡಿತ್ತು. ಈ ಕಾರ್ಯಕ್ರಮವನ್ನು ಸಂಗೀತ ವಿದುಷಿ ಕುಮಾರಿ ಶ್ರವಂತಿ ಎಸ್ ಕರ್ಲಿ ಭಾವಗೀತೆ, ಭಕ್ತಿಗೀತೆ,ಸೂಫಿ ಗೀತೆಗಳನ್ನು ಹಾಡಿ ಸೇರಿದ್ದ ಸಂಗೀತ ಪ್ರೇಮಿಗಳಿಗೆ ಸಂಗೀತದ ರಸದೌತಣವನ್ನು ಉಣಬಡಿಸಿದರು. ಅವರ ಜೊತೆಗೆ ತಬಲವನ್ನು ಅವರ ಸಹೋದರ ವಿಜಯ್ ಕುಮಾರ್ ಎಸ್ ಕರ್ಲಿಯವರು ನಡೆಸಿಕೊಟ್ಟರು.

ಕಾರ್ಯಕ್ರಮದ ಪ್ರಾರಂಭದಲ್ಲಿ ಡಾ.ಬಿ.ಸಿ.ರಾಜಕುಮಾರ್ ಅವರು ಶ್ರೀಮತಿ ರಂಗನಾಯಕಮ್ಮ ಮತ್ತು ಸುಬ್ಬರಾವ್ ಅವರ ಪರಿಚಯವನ್ನು ಹಾಗೂ ಸಂಗೀತ ಕಾರ್ಯಕ್ರಮ ದತ್ತಿ ನಿಧಿ ಸ್ಥಾಪಿಸಿದ್ದ ಶ್ರೀಮತಿ ಸುನಂದ ಅವರನ್ನು ಪರಿಚಯಿಸಿ ಇಂಥ ಪ್ರಶಂಸಾರ್ಹ ಕಾರ್ಯವನ್ನು ಮಾಡಿರುವುದಕ್ಕೆ ಅಭಿನಂದಿಸಿದರು. ಕಾರ್ಯಕ್ರಮ ನಡೆಸಿ ಕೊಡಲು ಆಗಮಿಸಿದ್ದ ಕು.ಶ್ರವಂತಿ ಹಾಗೂ ವಿಜಯ್ ಕುಮಾರ್ ಎಸ್ ಕರ್ಲಿಯವರ ಪರಿಚಯವನ್ನು ಹಾಗೂ ಅವರ ಎಳೆ ವಯಸ್ಸಿನಲ್ಲೇ ಮಾಡಿರುವ ಗಮನಾರ್ಹ ಸಾಧನೆಯನ್ನು ವಿವರಿಸುತ್ತಾ ಈರ್ವರನ್ನು ಅಭಿನಂದಿಸಿದರು. ಈ ಕಾರ್ಯಕ್ರಮಕ್ಕೆ ಆಗಮಿಸಿದ್ದ ಸಂಗೀತ ಪ್ರೇಮಿಗಳನ್ನು ಸ್ವಾಗತಿಸಿದರು. ಬಿಎಂಶ್ರೀ ಪ್ರತಿಷ್ಠಾನದ ಫೇಸ್ ಬುಕ್ ಪುಟದಲ್ಲಿ ಕಾರ್ಯಕ್ರಮ ವೀಕ್ಷಿಸಲು ವಿನಂತಿಸಿದರು.

ಕಾರ್ಯಕ್ರಮದ ಅಂತ್ಯದಲ್ಲಿ ಅಧ್ಯಕ್ಷತೆ ವಹಿಸಿದ್ದ ಡಾ.ಬೈರಮಂಗಲ ರಾಮೇಗೌಡರು ಶ್ರೀಮತಿ ರಂಗನಾಯಕಮ್ಮ ಹಾಗೂ ಶ್ರೀ ಸುಬ್ಬರಾವ್ ಅವರನ್ನು ಸ್ಮರಿಸಿದರು.ಹಾಗೆಯೇ ಕಾರ್ಯಕ್ರಮ ನಡೆಸಿಕೊಟ್ಟ ಶ್ರವಂತಿ ಅವರ ಪ್ರತಿಭಾನ್ವಿತ ಹಾಡುಗಾರಿಕೆಯನ್ನು ಮತ್ತು ತಬಲ ನುಡಿಸಿದ ವಿಜಯ್ ಕುಮಾರ್ ಅವರ ಪ್ರತಿಭೆಯನ್ನು ಅಭಿನಂದಿಸಿ ಮತ್ತಷ್ಟು ಸಾಧನೆ ಅವರಿಂದ ಜರುಗಲಿ ಎಂದು ಹಾರೈಸಿದರು.

ಶ್ರೀಮತಿ ಸುನಂದರವರು ಅನಾರೋಗ್ಯದ ಕಾರಣದಿಂದ ಅವರ ಪತಿ ಶ್ರೀ ಶಿವಶಂಕರ್ ರವರು ಭಾಗವಹಿಸಿ ಸಂಗೀತ ಗೋಷ್ಠಿ ನಡೆಸಿಕೊಟ್ಟ ಕಲಾವಿದರನ್ನು ಸನ್ಮಾನಿಸಿದರು. ಡಾ.ಹೆಚ್.ಎಸ್.ಎಂ.ಪ್ರಕಾಶ್ ರವರು ವಂದನೆಗಳನ್ನು ಸಲ್ಲಿಸಿದರು.

## ಶ್ರದ್ಧಾಂಜಲಿ

### ಪ್ರೊ. ಚಂದ್ರಶೇಖರ ಪಾಟೀಲ

(೧೬ಜೂನ್೧೯೩೯-೧೦ಜನವರಿ೨೦೨೨)



ಕವಿ, ನಾಟಕಕಾರ, ವಿಮರ್ಶಕ, ಕನ್ನಡ ಪರ ಹೋರಾಟಗಾರ, ವಾಗ್ಮಿ,'ಸಂಕ್ರಮಣ'ಪತ್ರಿಕೆಯ ಸಂಪಾದಕ ಪ್ರೊ. ಚಂದ್ರಶೇಖರ ಪಾಟೀಲರು ನಿಧನರಾದುದಕ್ಕೆ ಬಿ.ಎಂ.ಶ್ರೀ. ಪ್ರತಿಷ್ಠಾನವು ಸಂತಾಪ ವ್ಯಕ್ತಪಡಿಸುತ್ತದೆ.

### ಚೆನ್ನವೀರ ಕಣವಿ

(೨೮ ಜೂನ್ ೧೯೨೮ - ೧೬ ಫೆಬ್ರವರಿ ೨೦೨೨)



ಚೆನ್ನವೀರ ಕಣವಿ ಅವರು ಕನ್ನಡದ ಸಮನ್ವಯ ಕವಿ, ಸುನೀತಗಳ ಸಾಮ್ರಾಟ ಎಂದು ಪ್ರಸಿದ್ಧರಾಗಿದ್ದ ಕನ್ನಡದ ಖ್ಯಾತ ವಿದ್ವಾಂಸ ಮತ್ತು ಹೊಸಗನ್ನಡ ಕಾವ್ಯದ ಪ್ರಮುಖ ಕವಿಗಳಲ್ಲಿ ಒಬ್ಬರಾಗಿದ್ದರು. ಅವರ ನಿಧನಕ್ಕೆ ಬಿ.ಎಂ.ಶ್ರೀ. ಪ್ರತಿಷ್ಠಾನವು ಸಂತಾಪ ವ್ಯಕ್ತಪಡಿಸುತ್ತದೆ.

## ಗೌರವ ಕಾರ್ಯದರ್ಶಿ ಡಾ. ಹೆಚ್.ಎಸ್ ಎಂ. ಪ್ರಕಾಶ್ ನಿವೃತ್ತಿ



ದಿನಾಂಕ ೧೬ನೇ ಮಾರ್ಚಿ ೨೦೨೦ರಂದು ಗೌರವ ಕಾರ್ಯದರ್ಶಿಯಾಗಿ ಅಧಿಕಾರ ವಹಿಸಿಕೊಂಡಿದ್ದ ಡಾ. ಹೆಚ್.ಎಸ್ ಎಂ. ಪ್ರಕಾಶ್ ಅವರು ದಿನಾಂಕ ೮ನೇ ಫೆಬ್ರವರಿ ೨೦೨೨ರಂದು ನಿವೃತ್ತಿಯಾದರು.

ಜನವರಿ ೧೯೮೦ರಿಂದ ಮೇ ೨೦೧೫ರವರೆಗೆ ಭಾರತೀಯ ಭೂ ವೈಜ್ಞಾನಿಕ ಸರ್ವೇಕ್ಷಣ ಸಂಸ್ಥೆಯಲ್ಲಿ ಭಾರತದಾದ್ಯಂತ ಸೇವೆಸಲ್ಲಿಸಿದ್ದಾರೆ.ನವದೆಹಲಿಯ ಗಣಿ ಮಂತ್ರಾಲಯದಲ್ಲಿ ತಾಂತ್ರಿಕ ನಿರ್ದೇಶಕರಾಗಿ ಜವಾಬ್ದಾರಿಯನ್ನು ನಿರ್ವಹಿಸಿದ್ದಾರೆ. 'ಹವಾಮಾನ ಬದಲಾವಣೆಗೆ ಮೂಲಕಾರಣ ಶಿಲಾಪದರಗಳಲ್ಲಿ ಆಗುವ ಬದಲಾವಣೆ' ಎಂಬ ಭೂವೈಜ್ಞಾನಿಕ ಅಂಶವನ್ನು ೪೦೦ಕ್ಕೂ ಮಿಗಿಲಾದ ಭಾಷಣಗಳು ಹಾಗೂ ಟಿ.ವಿ. ಮಾಧ್ಯಮಗಳ ಮೂಲಕ ಪ್ರಚಾರ ಪಡೆಸಿದ್ದಾರೆ. ಸಾಹಿತ್ಯದಲ್ಲಿ ಆಸಕ್ತಿ ಹೊಂದಿದ್ದು ಹಲವಾರು ಕೃತಿಗಳನ್ನು ಅನುವಾದಿಸಿರುತ್ತಾರೆ. ಇವರ ಅನುವಾದ ಕೃತಿಗಳು. ಕೇಂದ್ರ ಸಾಹಿತ್ಯ ಅಕಾಡೆಮಿ, ಕುವೆಂಪು ಭಾಷಾಭಾರತಿ ಪ್ರಾಧಿಕಾರ ಮತ್ತು ನವಕರ್ನಾಟಕ ಪ್ರಕಾಶನದ ವತಿಯಿಂದ ಪ್ರಕಟವಾಗಿದೆ.

ಹೊಂಗನಸು ಡಾ. ಹೆಚ್.ಎಸ್ ಎಂ. ಪ್ರಕಾಶ್ ಅವರ ಸೇವೆಯನ್ನು ದಾಖಲಿಸಿ ಅವರಿಗೆ ಅಭಿನಂದನೆಗಳನ್ನು ಸಲ್ಲಿಸುತ್ತದೆ.

೦೩-೨-೨೦೨೨

## ಡಿ.ಎಲ್.ಎನ್. ಬದುಕು ಬರಹ




ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿಗೆ ಸಂಬಂಧಿಸಿದಂತೆ ಉಪನ್ಯಾಸ ನೀಡಲು ಆ.ನೇ. ಉಪಾಧ್ಯೆ, ಡಿ.ಎಲ್.ನರಸಿಂಹಾಚಾರ್, ಎಂ.ಜಿ.ನಂಜುಂಡಾರಾಧ್ಯ, ಸೋಸಲೆ ಅಯ್ಯಾ ಶಾಸ್ತ್ರಿಗಳ ಹೆಸರಿನಲ್ಲಿ ಸ್ಥಾಪಿಸಿರುವ ದತ್ತಿಗಳಿಂದ ಒಂದೊಂದು ವರ್ಷ ಒಬ್ಬೊಬ್ಬರ ಬದುಕು ಬರಹ ಕುರಿತು ಉಪನ್ಯಾಸ ಕಾರ್ಯಕ್ರಮವನ್ನು ಆಯೋಜಿಸಲಾಗುತ್ತದೆ. ಅದರಂತೆ ಈ ವರ್ಷದಲ್ಲಿ 'ಡಿ.ಎಲ್.ಎನ್. ಬದುಕು ಬರಹ' ಆನ್‌ಲೈನ್ ಉಪನ್ಯಾಸ ಆಯೋಜಿಸಲಾಗಿತ್ತು. ವಿಷಯ ಕುರಿತು ಮೈಸೂರಿನ ಡಾ.ಎನ್.ಕೆ. ರಾಮಶೇಷನ್ ಮಾತನಾಡಿದರು.

ಉಪನ್ಯಾಸಕಾರ : ಡಿ.ಎಲ್.ನರಸಿಂಹಾಚಾರ್ ಅವರು ಕನ್ನಡದ ಶ್ರೇಷ್ಠ ವಿದ್ವಾಂಸರಲ್ಲಿ ಒಬ್ಬರು. ಕನ್ನಡ ಭಾಷೆ ಸಾಹಿತ್ಯಗಳ ಸಂಶೋಧನಾ ಕ್ಷೇತ್ರದಲ್ಲಿ ಭದ್ರವಾದ ಬುನಾದಿಯನ್ನು ಹಾಕಿದ ಮಹನೀಯರು ೨೭.೧೦.೧೯೦೬ರಂದು ಚಿಕ್ಕನಾಯಕನ ಹಳ್ಳಿಯಲ್ಲಿ ಹುಟ್ಟಿದ ಇವರ ಪೂರ್ಣ ಹೆಸರು ದೊಡ್ಡಬೆಲೆ ಲಕ್ಷ್ಮೀನರಸಿಂಹಾಚಾರ್. ಬಿ.ಎ. ಮತ್ತು ಎಂ.ಎ. ಪದವಿಗಳನ್ನು ಉನ್ನತ ದರ್ಜೆಯಲ್ಲಿ ಪಾಸು ಮಾಡಿದ ಡಿ.ಎಲ್.ಎನ್. ಅವರಿಗೆ ಟಿ.ಎಸ್. ವೆಂಕಣ್ಣಯ್ಯ, ಬಿ.ಎಂ.ಶ್ರೀಕಂಠಯ್ಯ, ಎ.ಆರ್. ಕೃಷ್ಣಶಾಸ್ತ್ರಿಗಳು ಅಧ್ಯಾಪಕರಾದರೆ, ಕುವೆಂಪು, ಡಿ.ಕೆ. ಭೀಮಸೇನರಾವ್, ಎನ್. ಅನಂತರಂಗಾಚಾರ್, ಕೆ. ವೆಂಕಟರಾಮಪ್ಪ ಮುಂತಾದವರು ಸಹ ಪಾಠಿಗಳಾಗಿದ್ದರು. ಮೈಸೂರಿನ ಪ್ರಾಚ್ಯವಿದ್ಯಾ ಸಂಶೋಧನ ಸಂಸ್ಥೆಯಲ್ಲಿ ಕನ್ನಡ ಪಂಡಿತರಾಗಿ ವೃತ್ತಿಜೀವನ ಪ್ರಾರಂಭಿಸಿದ ಡಿ.ಎಲ್. ಎನ್. ಮುಂದೆ ಮಹಾರಾಜ ಮತ್ತು ಯುವರಾಜ ಕಾಲೇಜುಗಳಲ್ಲಿ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿದರು. ೧೯೬೨ರಲ್ಲಿ ನಿವೃತ್ತಿಯಾದ ಮೇಲೆ ಅಧ್ಯಯನ, ಬರವಣಿಗೆ, ಸಂಶೋಧನಾ ಚಟುವಟಿಕೆಗಳನ್ನು ಮತ್ತಷ್ಟು ಚುರುಕುಗೊಳಿಸಿದರು. ವಿಶ್ವವಿದ್ಯಾಲಯ ಧನಸಹಾಯ ಆಯೋಗದ ಸಂಶೋಧಕ ವಿದ್ವಾಸರಾಗಿದ್ದಾಗ ಪ್ರಕಟಿಸಿದ 'ಕನ್ನಡ ಗ್ರಂಥ ಸಂಪಾದನೆ' ಹಾಗೂ 'ಪಂಪ ಭಾರತ ದೀಪಿಕೆ' ಸಾರ್ವಕಾಲಿಕ ಶ್ರೇಷ್ಠ ಗ್ರಂಥಗಳು. ಕನ್ನಡ ಕನ್ನಡ ನಿಘಂಟಿನ ಪ್ರಧಾನ ಸಂಪಾದಕರಾಗಿ ಕಡು ನಿಷ್ಠೆ ಮತ್ತು ಶ್ರದ್ಧೆಯಿಂದ ಕೆಲಸ ಮಾಡಿದರು. ಡಿ.ಎಲ್.ಎನ್. ನಿರಂತರ ಸಂಶೋಧಕರಾಗಿ ಕನ್ನಡ ಮತ್ತು ಇಂಗ್ಲೀಷ್ ಭಾಷೆಗಳಲ್ಲಿ ೭೦ಕ್ಕೂ ಹೆಚ್ಚು ಸಂಶೋಧನಾ ಮತ್ತು ಸಮೀಕ್ಷಾ ಲೇಖನಗಳನ್ನು ಬರೆದು ನಾಡಿನ ಪ್ರಸಿದ್ಧ ವಿದ್ವತ್ ಪತ್ರಿಕೆಗಳಲ್ಲಿ ಪ್ರಕಟಿಸಿದರು. ಅವರ ಕೃತಿಗಳಲ್ಲಿ ಆಳವಾದ ಪಾಂಡಿತ್ಯ ಮತ್ತು ಸಂಶೋಧನೆಯ ಸೂಕ್ಷ್ಮತೆಯ ದೃಷ್ಟಿಯಿಂದ ಆದರ್ಶಪ್ರಾಯವಾದ ಕೃತಿಗಳೆಂದರೆ– ಕರ್ಣಾಟಕ ಮಹಾಭಾರತ, ಪಂಪರಾಮಾಯಣ ಸಂಗ್ರಹ, ವಡ್ಡಾರಾಧನೆ, ಸಿದ್ಧರಾಮ ಚರಿತ್ರೆಯ ಸಂಗ್ರಹ, ಶಬ್ದಮಣಿ ದರ್ಪಣಂ, ಶಬ್ದವಿಹಾರ, ಕನ್ನಡ ಗ್ರಂಥ ಸಂಪಾದನೆ, ಪಂಪಭಾರತ ದೀಪಿಕೆ, ಪೀಠಿಕೆಗಳು ಲೇಖನಗಳು, ಆಯ್ದ ಲೇಖನಗಳು. ನಲವತ್ತು ವರ್ಷಗಳಿಗೂ ಹೆಚ್ಚು ಕಾಲ ಕನ್ನಡ ಭಾಷೆ ಸಾಹಿತ್ಯಗಳ ಅಭಿವೃದ್ಧಿಗೆ ಸರ್ವ ಶಕ್ತಿಯನ್ನು ವಿನಿಯೋಗಿಸಿದ ಬಹುಮುಖ ವಿದ್ವಾಂಸರಾದ ಡಿ.ಎಲ್.ಎನ್. ತಾವು ಗಳಿಸಿಕೊಂಡ ಪ್ರೌಢಿಮೆಯನ್ನು ವಿದ್ಯಾರ್ಥಿಗಳಿಗೆ, ಓದುಗರಿಗೆ ಶ್ರೋತೃಗಳಿಗೆ ಹಂಚಿದರು. ಈ ವಿದ್ವತ್ ಚೇತನ ೧೯೭೧ ಮೇ ೭ರಂದು ಇಹಲೋಕದಿಂದ ನಿರ್ಗಮಿಸಿದರು ಎಂದು ಉಪನ್ಯಾಸಕರಾದ ಡಾ.ಎಸ್.ಕೆ. ರಾಮ ಶೇಷನ್ ಅವರು ನುಡಿದರು.

ಆನ್‌ಲೈನ್ ಉಪನ್ಯಾಸ ಸಂಯೋಜನೆ ಮಾಡಿದ ಡಾ.ಬಿ.ಸಿ. ರಾಜಕುಮಾರ್ ಸ್ವಾಗತಿಸಿದರು. ಡಾ. ಬೈರಮಂಗಲ ರಾಮೇಗೌಡ ಪ್ರಾಸ್ತಾವಿಕ ಮಾತುಗಳನ್ನಾಡಿದರು.

## ಬಿ.ಎಂ.ಶ್ರೀ. ಪ್ರತಿಷ್ಠಾನದ ಶಿಕ್ಷಣ ಸಂಯೋಜನಾಧಿಕಾರಿ ಡಾ॥ ವಿಜಯಾ ಸುಬ್ಬರಾಜ್ ನಿವೃತ್ತಿ



ಕಳೆದ ೧೪ ವರ್ಷಗಳಿಂದ ಬಿಎಂಶ್ರೀ ಪ್ರತಿಷ್ಠಾನದ ಶಿಕ್ಷಣ ಸಂಯೋಜನಾಧಿಕಾರಿಯಾಗಿ ಸೇವೆ ಸಲ್ಲಿಸಿದ ಡಾ॥ ವಿಜಯಾ ಸುಬ್ಬರಾಜ್ ಅವರು ದಿನಾಂಕ ೨೬-೧೨-೨೦೨೧ರಂದು ನಿವೃತ್ತಿ ಹೊಂದಿದರು. ಈ ಸುದೀರ್ಘ ಅವಧಿಯಲ್ಲಿ ಅವರ ನೇತೃತ್ವದಲ್ಲಿ ೧೯ ವಿದ್ಯಾರ್ಥಿಗಳು ಪಿಹೆಚ್ ಡಿ ಪದವಿಯನ್ನು ಪಡೆದಿದ್ದಾರೆ ಹಾಗೂ ೯ ಬ್ಯಾಚ್ ಗಳಲ್ಲಿ ನೊಂದಣಿಯಾಗಿದ್ದ ೧೧೬ ವಿದ್ಯಾರ್ಥಿಗಳು ಎಂಫಿಲ್ ಪದವಿಯನ್ನು ಪಡೆದಿರುತ್ತಾರೆ.

ಈ ಅವಧಿಯಲ್ಲಿ ಅವರು ಹಂಪಿ ಕನ್ನಡ ವಿಶ್ವವಿದ್ಯಾಲಯದ ಅಧಿಕಾರಿಗಳು, ಮಾರ್ಗದರ್ಶನ ನೀಡುತ್ತಿದ್ದ ಅಧ್ಯಾಪಕರು ಹಾಗೂ ವಿದ್ಯಾರ್ಥಿಗಳ ಜೊತೆ ನಿರಂತರ ಸಂಪರ್ಕದಲ್ಲಿದ್ದು ವಿದ್ಯಾರ್ಥಿಗಳ ಏಳಿಗೆಗಾಗಿ ಶ್ರಮಿಸಿ ಬಿಎಂಶ್ರೀ ಪ್ರತಿಷ್ಠಾನದ ಪ್ರತಿಷ್ಠೆಯನ್ನು ಹೆಚ್ಚಿಸಿರುತ್ತಾರೆ. ಅವರ ಸೇವೆಯನ್ನು ಹೊಂಗನಸು ಹೆಮ್ಮೆಯಿಂದ ದಾಖಲಿಸಿ ಅವರಿಗೆ ಅಭಿನಂದನೆಗಳನ್ನು ಸಲ್ಲಿಸುತ್ತದೆ.

ಡಾ.ವಿಜಯಾ ಸುಬ್ಬರಾಜ್ ಬೆಂಗಳೂರಿನ ಎಂ.ಇ.ಎಸ್. ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸುತ್ತಲೇ ಬೇರೆ ಕಡೆ ಆಂಗ್ಲ ಪ್ರಾಧ್ಯಾಪಕರಾಗಿ, ಸ್ನಾತಕೋತ್ತರ ಪದವಿ ಪ್ರಾಧ್ಯಾಪಕರಾಗಿ ಕೂಡ ಸೇವೆ ಸಲ್ಲಿಸಿದ್ದಾರೆ.

ಸದ್ಯ ಬಿ.ಎಂ.ಶ್ರೀ ಪ್ರತಿಷ್ಠಾನದ ಪಿಎಚ್.ಡಿ. ತರಗತಿಗಳಿಗೆ ಅತಿಥಿ ಉಪನ್ಯಾಸಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಕಾವ್ಯ, ಕಥೆ, ಕಾದಂಬರಿ, ನಾಟಕ, ವಿಮರ್ಶೆ, ಸಂಶೋಧನೆ, ಅನುವಾದ, ಪ್ರವಾಸ ಕಥನ, ಮಕ್ಕಳ ಸಾಹಿತ್ಯ ಇತ್ಯಾದಿ ಪ್ರಕಾರಗಳಿಗೆ ತಮ್ಮ ಅಮೂಲ್ಯವಾದ ಕೊಡುಗೆ ನೀಡಿದಾರೆ. ಕರ್ನಾಟಕ ಸಾಹಿತ್ಯ ಅಕಾಡೆಮಿ ಗೌರವ ಪ್ರಶಸ್ತಿ, ಕುವೆಂಪು ಭಾಷಾ ಭಾರತಿ ಪ್ರಶಸ್ತಿ, ಅತ್ತಿಮಬ್ಬೆ ಪ್ರಶಸ್ತಿ, ಎಸ್.ವಿ. ಪರಮೇಶ್ವರ ಭಟ್ಟ ಪ್ರಶಸ್ತಿ, ಎಚ್.ವಿ. ಸಾವಿತ್ರಮ್ಮ ಪಶಸ್ತಿ ಇತ್ಯಾದಿ ಗೌರವಗಳು ಇವರಿಗೆ

## ಶ್ರೀಮತಿ ಕಮಲಿನಿ ಬಾಲೂರಾವ್



ಶ್ರೇಷ್ಠ ಸಾಹಿತಿ, ಅನುವಾದಕರು ಮತ್ತು ಕೇಂದ್ರ ಸಾಹಿತ್ಯ ಅಕಾಡೆಮಿಯ ಕಾರ್ಯದರ್ಶಿಗಳೂ ಆಗಿದ್ದ ಶ್ರೀ ಶಾ.ಬಾಲೂರಾಯರ ಪತ್ನಿ ಮತ್ತು ಹೊಸಗನ್ನಡದ ಆಚಾರ್ಯ ಬಿ.ಎಂ.ಶ್ರೀ. ಅವರ ಮಗಳು ತಂಗಮ್ಮ ಮತ್ತು ಅಳಿಯ ಎನ್. ನಾಗರಾಜರಾವ್ ಅವರ ಪುತ್ರಿಯಾದ ಶ್ರೀಮತಿ ಕಮಲಿನಿ ಅವರು ಬಿ.ಎಂ.ಶ್ರೀ. ಪ್ರತಿಷ್ಠಾನಕ್ಕೆ ನೀಡಿರುವ ಕೊಡುಗೆ ಅಪಾರ. ಅವರು ಶ್ರೀ ಸಾಹಿತ್ಯ ಪ್ರಶಸ್ತಿ ಹಾಗೂ ಶಾ.ಬಾಲೂರಾವ್ ಪ್ರಶಸ್ತಿಗಳನ್ನು ಸ್ಥಾಪಿಸಿರುವುದಲ್ಲದೆ ಪ್ರತಿಷ್ಠಾನಕ್ಕೆ ನೆರವಿನ ರೂಪದಲ್ಲಿ ಲಕ್ಷಾಂತರ ರೂಪಾಯಿಗಳನ್ನು ದೇಣಿಗೆಯಾಗಿ ನೀಡಿದ್ದಾರೆ.




# ಪತ್ರಿಕಾ ನೆನಪು




## ಬಿಎಂಶ್ರೀ ಪ್ರತಿಷ್ಠಾನದಿಂದ ದೇಶಭಕ್ತಿ ಗೀತೆ ಸ್ಪರ್ಧೆ

**ಬೆಂಗಳೂರು:** ಬಿಎಂಶ್ರೀ ಪ್ರತಿಷ್ಠಾನವು 75ನೇ ಸ್ವಾತಂತ್ರ್ಯೋತ್ಸವ ಅಂಗ ವಾಗಿ ಕೆ. ಮೋಹನ್‌ದೇವ ಆಳ್ವ ಹಾಗೂ ಡಾ. ಎಂ.ಕೆ. ಶೈಲಜಾ ಆಳ್ವ ದತ್ತಿಯಿಂದ ಜ. 30ರಂದು ದೇಶಭಕ್ತಿ ಗೀತೆ ಸ್ಪರ್ಧೆ ಏರ್ಪಡಿಸಿದೆ. ಕಿರಿಯರ ವಿಭಾಗಕ್ಕೆ 6ರಿಂದ 13 ವರ್ಷ ಹಾಗೂ ಹಿರಿಯರ ವಿಭಾಗಕ್ಕೆ 14ರಿಂದ 23 ವರ್ಷ ವಯೋಮಿತಿ ನಿಗದಿಪಡಿಸಲಾಗಿದೆ. ಆಸಕ್ತರು 26ರೊಳಗೆ ಹೆಸರು ನೋಂದಾಯಿಸಬೇಕು. ವಿಳಾಸ: ಬಿಎಂಶ್ರೀ ಕಲಾ ಭವನ, 3ನೇ ಮುಖ್ಯರಸ್ತೆ, ಬಿಎಂಶ್ರೀ ಪ್ರತಿಷ್ಠಾನ ರಸ್ತೆ, ನರಸಿಂಹರಾಜ ಕಾಲನಿ, ಬೆಂಗಳೂರು- 16. ಹೆಚ್ಚಿನ ಮಾಹಿತಿಗೆ ದೂರವಾಣಿ ಸಂಖ್ಯೆ 99644 65956, 99728 12127 ಸಂಪರ್ಕಿಸಬಹುದು.

## ಎಚ್.ಎನ್.ಆನಂದ್‌ಗೆ ಬಿ.ಎಂ.ಶ್ರೀ ಪ್ರತಿಷ್ಠಾನ ಪ್ರಶಸ್ತಿ

ಬೆಂಗಳೂರು: ಬಿ.ಎಂ.ಶ್ರೀ. ಪ್ರತಿಷ್ಠಾನ ನೀಡುವ 2022ನೇ ಸಾಲಿನ 'ವಿ. ನಾಗರಾಜರಾವ್ ಸಮೂಹ ಮಾಧ್ಯಮ ಪ್ರಶಸ್ತಿ'ಗೆ ಪತ್ರಕರ್ತ ಎಚ್.ಎನ್. ಆನಂದ್ ಆಯ್ಕೆಯಾಗಿದ್ದಾರೆ.

ಪ್ರತಿಷ್ಠಾನದ ಅಧ್ಯಕ್ಷ ಬೈರಮಂಗಲ ರಾಮೇಗೌಡ ನೇತೃತ್ವದ ಸಮಿತಿಯು ಈ ಆಯ್ಕೆ ಮಾಡಿದೆ. ಪ್ರಶಸ್ತಿಯು ₹ 10 ಸಾವಿರ ನಗದು ಹಾಗೂ ಸ್ಮರಣ ಫಲಕವನ್ನು ಒಳಗೊಂಡಿದೆ.

ಪತ್ರಿಕಾರಂಗ ಹಾಗೂ ಮಾಧ್ಯಮ ಕ್ಷೇತ್ರಕ್ಕೆ ನೀಡಿದ ಕೊಡುಗೆಯನ್ನು ಪರಿಗಣಿಸಿ ಈ ಪ್ರಶಸ್ತಿ ನೀಡಲಾಗುತ್ತಿದೆ. ಎಚ್.ಎನ್. ಆನಂದ್ ಅವರು 'ಪ್ರಜಾವಾಣಿ'ಯಲ್ಲಿ ಕಾರ್ಯನಿರ್ವಹಿಸಿ ನಿವೃತ್ತರಾಗಿದ್ದಾರೆ. 1970-80ರ ದಶಕದಲ್ಲಿ 'ಸುಧಾ' ವಾರಪತ್ರಿಕೆಯಲ್ಲಿ ಕಾರ್ಯನಿರ್ವಹಿಸಿದ್ದ ಅವರು, ಕನ್ನಡ ನಿಯತಕಾಲಿಕೆಯಲ್ಲಿ 'ಕವರ್ ಸ್ಟೋರಿ' ಪರಿಕಲ್ಪನೆಯನ್ನು ಪರಿಚಯಿಸಿದ್ದರು. ಅಲ್ಲಿ ಅವರು ಬರೆಯುತ್ತಿದ್ದ 'ವಾರೆನೋಟ' ಅಂಕಣ ಮೊನಚಾದ ಹಾಸ್ಯ ಮತ್ತು ವಿಡಂಬನೆಯಿಂದ ಪ್ರಸಿದ್ಧವಾಗಿತ್ತು. ಅದಕ್ಕೂ ಮೊದಲು ವಿವಿಧ ಪತ್ರಿಕೆಗಳಲ್ಲಿ ಕಾರ್ಯನಿರ್ವಹಿಸಿದ್ದಾರೆ

ಅಜೀಂ ಪ್ರೇಮ್‌ಜಿ ವಿಶ್ವವಿದ್ಯಾಲಯದ ಪ್ರಕಟಣಾ ವಿಭಾಗದಲ್ಲೂ ಕೆಲಕಾಲ ಅವರು ಕಾರ್ಯನಿರ್ವಹಿಸಿದ್ದಾರೆ. ಫೆಬ್ರವರಿ ತಿಂಗಳ ಕೊನೆಯ ವಾರದಲ್ಲಿ ಬಿ.ಎಂ.ಶ್ರೀ. ಕಲಾಭವನದಲ್ಲಿ ಪ್ರಶಸ್ತಿ ಪ್ರದಾನ ಸಮಾರಂಭ ನಡೆಯಲಿದೆ ಎಂದು ಪ್ರಕಟಣೆ ತಿಳಿಸಿದೆ.

## ವಿಮರ್ಶಕಿ ಸುಮಿತ್ರಾಬಾಯಿಗೆ ಶೇಷಗಿರಿರಾವ್ ವಿಮರ್ಶಾ ಪ್ರಶಸ್ತಿ

ಪ್ರಜಾವಾಣಿ ವಾರ್ತೆ

ಬೆಂಗಳೂರು: ಬಿಎಂಶ್ರೀ ಪ್ರತಿಷ್ಠಾನ ನೀಡುವ 2022ನೇ ಸಾಲಿನ 'ಪ್ರೊ. ಎಲ್. ಎಸ್. ಶೇಷಗಿರಿರಾವ್ ವಿಮರ್ಶಾ ಪ್ರಶಸ್ತಿ'ಗೆ ವಿಮರ್ಶಕಿ ಬಿ.ಎನ್. ಸುಮಿತ್ರಾಬಾಯಿ ಆಯ್ಕೆಯಾಗಿದ್ದಾರೆ.

ಬಿ.ಎನ್. ಸುಮಿತ್ರಾಬಾಯಿ

ಸುಮಿತ್ರಾಬಾಯಿ ಅವರು ಸಂಸ್ಕೃತ ಪ್ರಾಧ್ಯಾಪಕರಾಗಿ 36 ವರ್ಷ ಸೇವೆ ಸಲ್ಲಿಸಿದ್ದಾರೆ.

ಸಾರ್ವತ್ರಿಕದೆಡೆಗೆ, ಅಕ್ಕ ಮಹಾದೇವಿ, ಸರಹದ್ದುಗಳ ಆಚೆ ಈಚೆ, ಸ್ತ್ರೀವಾದಿ ಪ್ರವೇಶಿಕೆ ಸೇರಿ 25 ಪುಸ್ತಕ ಬರೆದಿದ್ದಾರೆ.

'ಶೇಷಗಿರಿರಾವ್ ಆಶಯವಂತೆ ಕನ್ನಡ ವಿಮರ್ಶಾ ಕ್ಷೇತ್ರದಲ್ಲಿ ಉನ್ನತ ಸಾಧನೆ ಮಾಡಿದ ಹಾಗೂ ಜ್ಞಾನಪೀಠ, ಸರಸ್ವತಿ ಸಮ್ಮಾನ್, ನೃಪತುಂಗ, ಪಂಪ, ಕುವೆಂಪು ಹಾಗೂ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿಗಳಿಗೆ ಆಯ್ಕೆಯಾಗದವರನ್ನು ಈ ಪ್ರಶಸ್ತಿಗೆ ಪರಿಗಣಿಸಲಾಗುತ್ತದೆ. ಡಾ.ಟಿ.ವೆಂಕಟೇಶ ಮೂರ್ತಿ, ಬೆಳಕೆರೆ ಲಿಂಗರಾಜಯ್ಯ ಅವರಿದ್ದ ಸಮಿತಿಯು ಸರ್ವಾನುಮತದಿಂದ ಆಯ್ಕೆ ಮಾಡಿದೆ' ಎಂದು ಪ್ರತಿಷ್ಠಾನದ ಅಧ್ಯಕ್ಷ ಬೈರಮಂಗಲ ರಾಮೇಗೌಡ ಅವರು ತಿಳಿಸಿದ್ದಾರೆ.

'ಪ್ರಶಸ್ತಿ ₹10 ಸಾವಿರ ನಗದು, ಸ್ಮರಣಿಕೆ, ಅಭಿನಂದನಾ ಪತ್ರ ಒಳಗೊಂಡಿರಲಿದೆ. ಈ ತಿಂಗಳ ಕೊನೆಯ ವಾರ ಬಿಎಂಶ್ರೀ ಕಲಾಭವನದಲ್ಲಿ ಪ್ರಶಸ್ತಿ ಪ್ರದಾನ ಸಮಾರಂಭ ನಡೆಯಲಿದೆ' ಎಂದು ಅವರು ಪ್ರಕಟಣೆಯಲ್ಲಿ ಹೇಳಿದ್ದಾರೆ.

## ದೇಶಭಕ್ತಿ ಗೀತೆಗಳ ಗಾಯನ ಸ್ಪರ್ಧೆ

ಪ್ರ.ವಾ

ಉದ್ಘಾಟನೆ-ಬೈರಮಂಗಲ ರಾಮೇಗೌಡ, ಅತಿಥಿ-ಮೋಹನ್ ದೇವ್ ಆಳ್ವ, ಆಯೋಜನೆ ಮತ್ತು ಸ್ಥಳ-ಬಿಎಂಶ್ರೀ ಪ್ರತಿಷ್ಠಾನ, ಎಂ.ವಿ.ಸೀ ಸಭಾಂಗಣ, ಎನ್.ಆರ್.ಕಾಲೊನಿ, ಬೆಳಿಗ್ಗೆ 10

## ನಗರದಲ್ಲಿ ಇಂದು

**ಸಾಹಿತ್ಯಶ್ರೀ ಪ್ರಶಸ್ತಿ ಪ್ರದಾನ:** ಬರಗೂರು ರಾಮಚಂದ್ರಪ್ಪ, ಪುರಸ್ಕೃತರು-ಗುರುಲಿಂಗ ಕಾಪಸೆ, ಅತಿಥಿಗಳು-ಬಸವರಾಜ ಕಲ್ಗುಡಿ, ಎಂ.ಎಚ್.ಕೃಷ್ಣಯ್ಯ, ಪಿ.ವಿ.ನಾರಾಯಣ, ಆರ್.ಲಕ್ಷ್ಮೀನಾರಾಯಣ, ಅಧ್ಯಕ್ಷತೆ-ಬೈರಮಂಗಲ ರಾಮೇಗೌಡ, ಆಯೋಜನೆ-ಬಿಎಂಶ್ರೀ ಪ್ರತಿಷ್ಠಾನ, ಸ್ಥಳ-ಎಂವಿಸೀ ಸಭಾಂಗಣ, ಬಿಎಂಶ್ರೀ ಕಲಾಭವನ, ಎನ್.

ಪ್ರ.ವಾ

ಸಾಹಿತಿ ಬರಗೂರು ರಾಮಚಂದ್ರಪ್ಪ ಬೇಸರ • ಗುರುಲಿಂಗ ಕಾಪಸೆಗೆ 'ಶ್ರೀಸಾಹಿತ್ಯ ಪ್ರಶಸ್ತಿ' ಪ್ರದಾನ

## 'ವಿವಾದಾಲಯಗಳಾಗುತ್ತಿರುವ ವಿಶ್ವವಿದ್ಯಾಲಯಗಳು'

13/2/2022

## ಅನುದಾನವಿಲ್ಲದೆ ಹಂಪಿ ವಿವಿಗೆ ಸಂಕಷ್ಟ: ಬರಗೂರು ರಾಮಚಂದ್ರಪ್ಪ

13-2-2022 ವಾರ್ತಾಭಾರತಿ

## ಭಾಷಿಕ ಭ್ರಷ್ಟಾಚಾರ ಕನ್ನಡ ಭಾಷೆಗೆ ಅವಮಾನ

ಬರಗೂರು ರಾಮಚಂದ್ರಪ್ಪ

13/2/21

ಬಿಎಂಶ್ರೀ ಪ್ರತಿಷ್ಠಾನದ ವತಿಯಿಂದ ಶನಿವಾರ ನಡೆದ ಸಮಾರಂಭದಲ್ಲಿ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಮಾಜಿ ಅಧ್ಯಕ್ಷ ಹಿರಿಯ ವಿದ್ವಾಂಸ ಪ್ರೊ. ಗುರುಲಿಂಗ ಕಾಪಸೆ ಅವರಿಗೆ ಶ್ರೀ ಸಾಹಿತ್ಯ ಪ್ರಶಸ್ತಿ ನೀಡಿ ಗೌರವಿಸಲಾಯಿತು. ಬಂಡಾಯ ಸಾಹಿತಿ ಡಾ. ಬರಗೂರು ರಾಮಚಂದ್ರಪ್ಪ, ಡಾ. ಪಿ.ವಿ. ನಾರಾಯಣ, ಡಾ. ಆರ್. ಲಕ್ಷ್ಮೀನಾರಾಯಣ, ಬೈರಮಂಗಲ ರಾಮೇಗೌಡ, ಡಾ. ರಾಜಕುಮಾರ್, ಇನ್ನಿತರರು ಪಾಲ್ಗೊಂಡಿದ್ದರು.

### ಪ್ರೊ. ಗುರುಲಿಂಗ ಕಾಪಸೆಗೆ ಶ್ರೀ ಸಾಹಿತ್ಯ ಪ್ರಶಸ್ತಿ ಪ್ರದಾನ

## ಬಿಎಂಶ್ರೀ ಪರಿಕಲ್ಪನೆ ಚಿಂತನೆಗೆ ಅರ್ಹ

## FORM IV
## (See Rule-8)

Statement about ownership and other particulars about Newspaper “HONGANASU Kannada Monthly” Bangalore. As required under Rules 8 of the Registration A Newspapers (Central) Rules 1956.

1. Place of Publication — Bangalore
2. Periodicity of publication — Monthly
3. Printer’s Name — Sri. B.R. Ravindranath
   Whether Citizen of India — Yes
   Address — BMSree Smaraka Pratishtana, 3rd Main, B.M. Sree Pratishthanada Raste, NR Colony, Bangalore-560019
4. Publisher’s Name Sri. B.R. Ravindranath on behalf of the BMSree Smaraka Pratishtana, (Regd.)
   Whether Citizen of India — Yes
   Address — BMSree Smaraka Pratishtana, 3rd Main, B.M. Sree Pratishthanada Raste, NR Colony, Bangalore-560019
5. Editor’s Name — Sri. B.R. Ravindranath
   Whether Citizen of India — Yes
   Address— BMSree Smaraka Pratishtana, 3rd Main, B.M.Sree Pratishthanada Raste, NR Colony, Bangalore-560019

I, B.R. Ravindranath here by Declare that the particulars given are true to the best of my knowledge and belief.

Bangalore
1st March, 2022

Sd/-

B.R. Ravindranath


**HONGANASU KANNADA MONTHLY**
**RNI No. KAR/KAN/2015/64049**
**REGISTERED**
**Post office Registration No.RNP/KA/BGS/2229/2021-2023**
**dt. 28-12-2020**
**Office of Posting: Bangalore PSO, Bangalore 560026**
**Price : Annual Subscription Rs. 20/-**
**Date of publishing and Posting : 28-02-2022**


### ಡಿಸೆಂಬರ್ ೨೦೨೧ : ಗ್ರಂಥಾಲಯ ಮತ್ತು ಹಸ್ತಪ್ರತಿ ವಿಭಾಗದ ವರದಿ

ವಿವಿಧ ಲೇಖಕರು, ಸದಸ್ಯರು ಹಾಗೂ ಸಂಘ ಸಂಸ್ಥೆಗಳು ಪ್ರತಿಷ್ಠಾನದ ಗ್ರಂಥಾಲಯಕ್ಕೆ ಡಿಸೆಂಬರ್ ೨೦೨೧ನೇ ತಿಂಗಳಲ್ಲಿ, ಒಟ್ಟು ೪೮ ಪುಸ್ತಕಗಳನ್ನು ನೀಡಿದ್ದಾರೆ. ಡಾ. ದೇವರಕೊಂಡಾ ರೆಡ್ಡಿ, ಅಧ್ಯಕ್ಷರು, ಕರ್ನಾಟಕ ಇತಿಹಾಸ ಅಕಾದೆಮಿ, ಬೆಂಗಳೂರು ಇವರ ಸಂಪಾದಕತ್ವದಲ್ಲಿ ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಹೊರ ತಂದಿರುವ ಐದು ಶಾಸನ ಸಂಪುಟಗಳನ್ನು ನಮ್ಮ ಗ್ರಂಥಾಲಯಕ್ಕೆ ಕೊಡುಗೆಯಾಗಿ ಕೊಟ್ಟಿದ್ದಾರೆ.

ಗ್ರಂಥಾಲಯದಲ್ಲಿರುವ ಅಭಿನಂದನ ಮತ್ತು ಸಂಸ್ಮರಣ ಗ್ರಂಥಗಳ ಸೂಚಿಯನ್ನು ಸಿದ್ಧಪಡಿಸಿದೆ. ಗ್ರಂಥಾಲಯದಲ್ಲಿ ಒಟ್ಟು ೩೮೫ ಅಭಿನಂದನ ಗ್ರಂಥಗಳಿವೆ.

### ಡಿಸೆಂಬರ್ ೨೦೨೧ರಲ್ಲಿ ೩ ಕಾಗದದ ಹಸ್ತಪ್ರತಿಗಳನ್ನು ಸಂರಕ್ಷಿಸಿ ಸೂಚಿ ತಯಾರಿಸಲಾಗಿದೆ.

ಮೇಲುಕೋಟೆಯ ನಮ್ಮ ಹಿರಿಯ ಸದಸ್ಯರಾದ ಶ್ರೀ ಅರಯರ್ ಶ್ರೀರಾಮಶರ್ಮ ಅವರು, ತಮ್ಮ ಬಳಿಯಿದ್ದ ಶಾಲಿನಿವಾಹನ ಶಕವರ್ಷ ೧೪೪೦ನೇ ಕಾಲದ ಶಬ್ದಮಣಿ ದರ್ಪಣದ ತಾಳೆಗರಿ ಗ್ರಂಥವನ್ನು ಪ್ರತಿಷ್ಠಾನದ ಹಸ್ತಪ್ರತಿ ಸಂಗ್ರಹಾಲಯಕ್ಕೆ ಶಾಸ್ತ್ರದಾನವಾಗಿ ನೀಡಿರುತ್ತಾರೆ.

ಕೊರೋನಾ ವೈರಾಣು ಹರಡದಂತೆ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ಕೈಗೊಂಡ ಕೆಲವು ನಿರ್ಬಂಧಗಳ ಹಿನ್ನಲೆಯಲ್ಲಿ ಬಿಎಂಶ್ರೀ ಪ್ರತಿಷ್ಠಾನವು ಫೆಬ್ರವರಿ ೨೦೨೨ ರ ಹೊಂಗನಸು ವಾರ್ತಾಪತ್ರಿಕೆಯನ್ನು ಪ್ರಕಟಿಸಿರುವುದಿಲ್ಲ. ಸದಸ್ಯರು ಹಾಗೂ ಓದುಗರ ಕ್ಷಮೆ ಕೋರಿ ಸಹಕರಿಸಬೇಕೆಂದು ಕೋರುತ್ತೇವೆ.


**Printed and published by** : B.R.Ravindranath on behalf of the BMSRI SMARAKA PRATISHTANA, B.M.Sri Pratishtana Road, (3rd Main Road) NR Colony, Bangalore - 560019 and printed at Annapoorneshwari Printers, No. 11, 10 ‘C’ Main, 6th Block, Rajajinagar, Bangalore 10 . and published at BMSRI PRATISHTANA, B.M.Sri Pratishtana Road, 3rd Main Road, NR Colony, Bangalore - 560019 Editor : **B.R.Ravindranath**


**ಅಚ್ಚಾದ ಪುಸ್ತಕ**

ಶ್ರೀಮತಿ/ಶ್ರೀ..........................................................................

..............................................................................................

..............................................................................................


ವಿಳಾಸ
**ಬಿ.ಎಂ.ಶ್ರೀ. ಪ್ರತಿಷ್ಠಾನ**
ಬಿ.ಎಂ.ಶ್ರೀ. ಪ್ರತಿಷ್ಠಾನದ ರಸ್ತೆ, ೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ, ಬೆಂಗಳೂರು – ೧೯
ದೂರವಾಣಿ : ೨೬೬೧೫೮೭೭